ಡಾ. ಬ್ರಹ್ಮರ್ಷಿ ಪಿತಾಮಹ ಸುಭಾಷ್ ಪತ್ರೀಜಿ ಆಶೀರ್ವಾದಗಳೊಂದಿಗೆ

# ಅತೀಂದ್ರಿಯ ಶಕ್ತಿಗಳು


## ತಟವರ್ತಿ ವೀರರಾಘವರಾವ್

ಕನ್ನಡ ಅನುವಾದ :

ಜಿ. ಎಸ್. ಸುಮಲತ ರಾಜು




# ಅತೀಂದ್ರಿಯ ಶಕ್ತಿಗಳು

**ಮೂಲ : ತಟವರ್ತಿ ವೀರರಾಘವರಾವು**
**ಕನ್ನಡ ಅನುವಾದ : ಜಿ.ಎಸ್. ಸುಮಲತರಾಜು**

**ಶ್ರೀರಾಮ ಪಬ್ಲಿಕೇಶನ್ಸ್**
ಶ್ರೀ ರಾಮಧಾಮ ಪಿರಮಿಡ್ ಧ್ಯಾನಕೇಂದ್ರ,
ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್, ಬೆಂಗಳೂರು – 560 066

---

**ಪಿರಮಿಡ್ ವ್ಯಾಲಿ ಇಂಟರ್‌ನ್ಯಾಷನಲ್**
ಕೆಬ್ಬೆದೊಡ್ಡಿ ಗ್ರಾಮ, ಹಾರೋಹಳ್ಳಿ ಹೋಬಳಿ, ಕನಕಪುರ ರಸ್ತೆ, ಬೆಂಗಳೂರು

**Ateendriya Shaktigalu**
Edited & Published by **Srirama Publications,**
Sri Ramadhama Pyaramid Dyanakendra, Narayanappa Garden, Whitefiled, Bangalore - 560 066.
**M.: 9449695503, 8050082689, 9886532204**

| | | |
|---|---|---|
| ಮೊದಲನೇ ಮುದ್ರಣ | : | 2023 |
| ಹಕ್ಕುಗಳು | : | ಪ್ರಕಾಶಕರು |
| ಪ್ರಕಾಶಕರು | : | **ಶ್ರೀರಾಮ ಪಬ್ಲಿಕೇಶನ್ಸ್**<br>ಶ್ರೀ ರಾಮಧಾಮ ಪಿರಮಿಡ್ ಧ್ಯಾನಕೇಂದ್ರ,<br>ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್,<br>ಬೆಂಗಳೂರು – 560 066<br>ಮೊ.: 9449695503, 9886532204 |
| ಬಳಸಿದ ಕಾಗದ | : | 70 ಜಿ.ಎಸ್.ಎಂ. ಮ್ಯಾಪಲಿಥೊ ಡೆಮಿ 1/8 |
| ಪ್ರತಿಗಳು | : | 1000 |
| ಬೆಲೆ | : | 40/– |
| ಪುಟಗಳು | : | iv+28=32 |
| ಮುಖಪುಟ | : | ಚಂದ್ರಕಾಂತ ಪಟ್ಟಣ |
| ಅಕ್ಷರ ಜೋಡಣೆ | : | **ನಿರಂತರ ಸಾಯಿ ಕಮ್ಯೂನಿಕೇಷನ್ ಪ್ರೈ .ಲಿ**<br>ಮೊ: 96328 12541 |

ಮುದ್ರಣ :
**ಪೂರ್ಣಾ ಗ್ರಾಫಿಕ್ಸ್,**
ಬೆಂಗಳೂರು 9844167475

# ಸ್ವ-ಪರಿಚಯ

ನನ್ನ ಹೆಸರು ಎಚ್.ಎನ್.ಶ್ರೀನಿವಾಸ. ವೃತ್ತಿಯಲ್ಲಿ ಸಿವಿಲ್ ಇಂಜಿನಿಯರ್. ಪದವಿ ಪಡೆದ ಆರಂಭದಲ್ಲಿ, ಮೂರು ವರ್ಷಗಳ ಕಾಲ ಸರ್ಕಾರಿ ಉದ್ಯೋಗದಲ್ಲಿ ಕೆಲಸ ಮಾಡಿದ ನಂತರ, ಆ ಉದ್ಯೋಗದಲ್ಲಿ ನಿರಾಸಕ್ತಿ ಹೊಂದಿದ ನಾನು, 1990ರಲ್ಲಿ ನನ್ನ ಸ್ವಂತ ವ್ಯವಹಾರವನ್ನು ಪ್ರಾರಂಭಿಸಿದೆ. ನನ್ನ ಆಧ್ಯಾತ್ಮಿಕ ಪ್ರಯಾಣವು 1999ರಲ್ಲಿ ಎಸ್.ಎಸ್.ವೈ. ಅಂದರೆ, ಸಿದ್ಧಸಮಾಧಿ ಯೋಗ ಗುರೂಜಿಯವರಿಂದ ಪ್ರಾರಂಭವಾಯಿತು. 2004ರಲ್ಲಿ ವೀರಾಂಜನೇಯ ದೇವಾಲಯವನ್ನು ಬೆಂಗಳೂರಿನ ವೈಟ್‌ಫೀಲ್ಡ್‌ನಲ್ಲಿ ನಿರ್ಮಿಸಲಾಯಿತು. ಎಲ್ಲಾ ಆಚರಣೆಗಳು ದೇವಾಲಯದಲ್ಲಿ ನಿಯಮಿತವಾಗಿ ನಡೆಯುತ್ತಿದ್ದವು. ಆಧ್ಯಾತ್ಮದ ಬಗ್ಗೆ ನನಗೆ ಒಲವು ಹೆಚ್ಚಾದಂತೆ ನಾನು ಮತ್ತು ನನ್ನ ಪತ್ನಿ ಎಸ್.ಎನ್.ವಿಜಯಲಕ್ಷ್ಮಿ ಸೇರಿ 2008ರಲ್ಲಿ ನಾವು ದೇವಾಲಯದ ಪಕ್ಕದಲ್ಲಿ 'ಶ್ರೀ ರಾಮಧಾಮ ಧ್ಯಾನ ಮಂದಿರ' ಎಂಬ ಹೆಸರಿನ ಒಂದು ಧ್ಯಾನ ಮಂದಿರವನ್ನು ನಿರ್ಮಿಸಿದೆವು. ಇದನ್ನು ಸಿದ್ಧಸಮಾಧಿ ಯೋಗ ಸಂಸ್ಥಾಪಕರಾದ ಡಾ.ಋಷಿ ಪ್ರಭಾಕರ್ ಗುರೂಜಿಯವರು ಉದ್ಘಾಟಿಸಿದರು. ಅಲ್ಲಿ ಎಸ್.ಎಸ್.ವೈ. ಶಿಕ್ಷಕರಿಂದ ಸಾಮೂಹಿಕ ಧ್ಯಾನ ತರಬೇತಿಗಳನ್ನು ಆಯೋಜಿಸುತ್ತಿದ್ದೆವು. 2009ರಲ್ಲಿ ಬ್ರಹ್ಮರ್ಷಿ ಪಿತಾಮಹ ಡಾ.ಸುಭಾಷ್ ಪತ್ರೀಜಿಯವರು ಧ್ಯಾನ ಅಧಿವೇಶನಕ್ಕಾಗಿ ಶ್ರೀರಾಮಧಾಮ ಕೇಂದ್ರಕ್ಕೆ ಭೇಟಿ ನೀಡಿದಾಗ 'ಆನಾಪಾನಸತಿ ಧ್ಯಾನ ವಿಧಾನ'ವನ್ನು ಪರಿಚಯ ಮಾಡಿಸಿದರು. ಪತ್ರೀಜಿಯವರನ್ನು ಭೇಟಿಯಾದ ನಂತರ, ದಿನನಿತ್ಯದ ನನ್ನ ಆಧ್ಯಾತ್ಮಿಕ ಅಭ್ಯಾಸದ ಕಾಲಾವಧಿಯನ್ನು ಹೆಚ್ಚಿಸಿದೆ. ಪಿ.ಎಸ್.ಎಸ್.ಎಂ.ನ ತತ್ವಸಿದ್ಧಾಂತದಲ್ಲಿ ಗುರು–ಶಿಷ್ಯರ ಕುರಿತಾದ ಒಂದು ಪ್ರಮುಖವಾದ ಅಂಶವು ನನ್ನ ಗಮನ ಸೆಳೆಯಿತು. 'ಯಾರೂ ಶಾಶ್ವತವಾಗಿ ಗುರುಗಳಲ್ಲ, ಯಾರೂ ಶಾಶ್ವತವಾಗಿ ಶಿಷ್ಯರೂ ಅಲ್ಲ, ಅವರಿಗೆ ಅವರೇ ಗುರುಗಳು. ಮಾಸ್ಟರ್ ಆಗಿ ಬದುಕಲು ಕಲಿಯಿರಿ, ಎಂದಿಗೂ ಶಿಷ್ಯರಾಗಿಯೇ ಇರಬೇಡಿ' ಎಂಬ ಪತ್ರೀಜಿಯವರ ಮಾತುಗಳು ಆಧ್ಯಾತ್ಮದಲ್ಲಿ ನನ್ನ ಆಸಕ್ತಿಯನ್ನು ಹೆಚ್ಚಿಸಿತು. 2013ರಲ್ಲಿ ಪತ್ರೀಜಿಯವರು ನನಗೆ ಪಿರಮಿಡ್ ವ್ಯಾಲಿ

ಇಂಟರ್‌ನ್ಯಾಷನಲ್ ಟ್ರಸ್ಟ್‌ನಲ್ಲಿ ಒಬ್ಬ ಟ್ರಸ್ಟಿಯಾಗಿ ಸೇವೆ ಮಾಡುವ ಸದವಕಾಶವನ್ನು ಒದಗಿಸಿದರು.

ಇದರಲ್ಲಿ ನನಗೆ 'ನಿತ್ಯಅನ್ನದಾನ ಸೇವೆ'ಯ ಜವಾಬ್ದಾರಿಯನ್ನು ವಹಿಸಲಾಯಿತು. ಪ್ರತಿಯೊಬ್ಬ ಮಾನವನು ಮಾಧವನಾಗಬೇಕಾದರೆ ಪ್ರತಿನಿತ್ಯವೂ ಶ್ರದ್ಧೆ, ಆಸಕ್ತಿಯಿಂದ ಧ್ಯಾನಾಭ್ಯಾಸ ಮಾಡಬೇಕು. ಅದರ ಜೊತೆಯಲ್ಲಿ 'ಸಸ್ಯಾಹಾರ', 'ಸ್ವಾಧ್ಯಾಯ', 'ಸಜ್ಜನ–ಸಾಂಗತ್ಯ, ಅಂದರೆ, ಸತ್ಸಂಗ' ಹಾಗೂ 'ಪಿರಮಿಡ್ ಶಕ್ತಿ ಬಳಕೆ' ಅವಶ್ಯಕ ಎಂದು ಆಧ್ಯಾತ್ಮಶಾಸ್ತ್ರ ತಿಳಿಸುತ್ತದೆ. ನಿರಂತರ, ಸಾಧನೆಯಿಂದ ಶಾರೀರಿಕ ಆರೋಗ್ಯ, ಮಾನಸಿಕ ಪ್ರಶಾಂತತೆ, ಬುದ್ಧಿ–ವಿಕಾಸ, ಆನಂದದ ಜೀವನ, ಆತ್ಮಜ್ಞಾನ ಮುಂತಾದವುಗಳು ಲಭಿಸುವುದು. ಹೊಸ ಯುಗದ ಆಧ್ಯಾತ್ಮ ಸಾಹಿತ್ಯವನ್ನು ಸ್ವಾಧ್ಯಾಯಕ್ಕಾಗಿ ಪ್ರಕಟಿಸುವ ಹಿನ್ನೆಲೆಯಲ್ಲಿ 'ಶ್ರೀರಾಮ ಪಬ್ಲಿಕೇಶನ್ಸ್' ಹೆಸರಿನ ಪುಟ್ಟ ಪ್ರಕಾಶನ ಸಂಸ್ಥೆಯನ್ನು ಆರಂಭಿಸಲಾಯಿತು. ಪತ್ರೀಜಿಯವರ ಮತ್ತು ತಟವರ್ತಿ ವೀರರಾಘವರಾವ್ ರವರ ಆದೇಶದ ಮೇರೆಗೆ ನಮ್ಮ ಪ್ರಕಾಶನದ ವತಿಯಿಂದ ಕೆಲವು ಆಧ್ಯಾತ್ಮಿಕ ಪುಸ್ತಕಗಳನ್ನು ಪ್ರಕಟಿಸಲಾರಂಭಿಸಿದೆವು. ಕೆಲವು ಪುಸ್ತಕಗಳನ್ನು ಕನ್ನಡಕ್ಕೆ ಅನುವಾದಿಸಿ ಮುದ್ರಿಸಲಾಯಿತು. ಕೆಲವು ತೆಲುಗು ಪುಸ್ತಕಗಳನ್ನು ಮರುಮುದ್ರಣ ಮಾಡಲಾಯಿತು. ತೆಲುಗಿನ ಉತ್ತಮ ಪುಸ್ತಕಗಳು ಕನ್ನಡದ ಆಧ್ಯಾತ್ಮ ಸಾಧಕರಿಗೂ ದೊರಕಲೆಂದು ನಾವು ಇಂತಹ ಪ್ರಯತ್ನ ಮಾಡಿದ್ದೇವೆ.

ತಮ್ಮ ವಿಶ್ವಾಸಿಗಳು,

**ಎಚ್.ಎನ್.ಶ್ರೀನಿವಾಸ**

ಮತ್ತು

**ಎಸ್.ಎನ್.ವಿಜಯಲಕ್ಷ್ಮಿ**

**ಸಂಸ್ಥಾಪಕರು,**

ಶ್ರೀರಾಮಧಾಮ ಧ್ಯಾನಕೇಂದ್ರ

# ಅತೀಂದ್ರಿಯ ಶಕ್ತಿಗಳು ಅವಶ್ಯಕವೇ?
# ಎಷ್ಟರವರೆಗೆ ಅವಶ್ಯಕ?

ಮಾನವ ಇಂದ್ರಿಯಗಳಿಂದ ಮಾಡಲಾರದ ಕೆಲಸಗಳನ್ನು ಅತೀಂದ್ರಿಯ ಶಕ್ತಿಗಳು ಎನ್ನುತ್ತಾರೆ. ಅದೇರೀತಿ ಮಾನವ ಇಂದ್ರಿಯಗಳಿಂದ ತಿಳಿದುಕೊಳ್ಳಲಾರದ ವಿಷಯಗಳನ್ನು ಅತೀಂದ್ರಿಯ ಜ್ಞಾನ ಎನ್ನುತ್ತಾರೆ.

ಈ ವಿಷಯಗಳು ಅಂದರೆ ಅತೀಂದ್ರಿಯ ಜ್ಞಾನ, ಈ ಕೆಲಸಗಳು ಅಂದರೆ ಅತೀಂದ್ರಿಯ ಶಕ್ತಿಗಳು ಸಾಮಾನ್ಯರಿಗೆ ಆಶ್ಚರ್ಯವನ್ನು ಉಂಟುಮಾಡುತ್ತಿರುತ್ತವೆ. ಕಾರಣ ಈ ವಿಷಯಗಳು ಅವರಿಗೆ ತಿಳಿದಿಲ್ಲವಾದ್ದರಿಂದ, ಈ ಕೆಲಸಗಳನ್ನು ಅವರು ಮಾಡಲಾರರಾದ್ದರಿಂದ.

ಅಂತಹ ಅತೀಂದ್ರಿಯ ಜ್ಞಾನವನ್ನು ದಿವ್ಯಜ್ಞಾನ ಎನ್ನುತ್ತಾರೆ. ಅಂತಹ ಅತೀಂದ್ರಿಯ ಶಕ್ತಿಗಳನ್ನು ದಿವ್ಯಶಕ್ತಿಗಳು ಎಂದೂ ಸಹ ಕರೆಯುತ್ತಾರೆ. ಅಂತಹ ದಿವ್ಯತ್ವ ಹೊಂದಿದವರನ್ನು ದಿವ್ಯರು ಇಲ್ಲವೇ 'ದೇವರುಗಳು' ಎಂದು ಲೋಕದಲ್ಲಿ ಕರೆಯುತ್ತಾರೆ. ಅಂತಹ ದಿವ್ಯತ್ವ ಬಹಳ ಕಡಿಮೆ ಜನರೇ ಸಾಧಿಸಬಲ್ಲರು. ಎಂತಹವರು ಅಂತಹವುಗಳನ್ನು ಸಾಧಿಸಬಲ್ಲರೋ ತಿಳಿದುಕೊಳ್ಳೋಣ.



ಲೋಕದಲ್ಲಿ ಬಹಳಷ್ಟು ಕಡಿಮೆ ಜನರಿಗೆ ಮಾತ್ರವೇ ಭೌತಿಕ ವಿಷಯಗಳ ಬಗ್ಗೆ, ಭೌತಿಕ ಭೋಗಗಳ ಬಗ್ಗೆ, ವಿರಕ್ತಿ ಉಂಟಾಗುತ್ತದೆ. ಅಂದರೆ ಆಸಕ್ತಿ ಕಡಿಮೆಯಾಗುತ್ತದೆ. ಯೋಗ ವಾಶಿಷ್ಟದಲ್ಲಿ ವಶಿಷ್ಟ ಮಹರ್ಷಿ ಶ್ರೀರಾಮನಿಗೆ ಬೋಧಿಸಿದ ವಿಷಯುಗಳು ಯಥಾರ್ಥಗಳನ್ನು ಅವರು ಅನುಭವಪೂರ್ವಕವಾಗಿ ತಿಳಿದುಕೊಳ್ಳುತ್ತಾರೆ.

ಅವು ಯಾವುವೆಂದು ಸ್ವಲ್ಪ ತಿಳಿದುಕೊಳ್ಳೋಣ.

**ಶ್ಲೋ॥ ಅನನ್ತಾನೀಹ ದುಃಖಾನಿ ಸುಖಂ ತೃಣಲವೋಪಮಮ್**
**ನಾತಃ ಸುಖೇಷು ಬಧ್ನೀಯಾದ್ದೃಷ್ಟಿಂ ದುಃಖಾನು ಬಂಧಿಷು**

**(ಯೋಗವಾಶಿಷ್ಟ)**

ತಾ:– ಪ್ರಪಂಚದಲ್ಲಿ ದುಃಖಗಳು ಅನಂತಗಳು(ಹೇರಳ) ಸುಖ ತುಂಬಾ ವಿರಳ, ಆದ್ದರಿಂದ ದುಃಖದಿಂದ ಕೂಡಿಕೊಂಡಿರುವ ಈ ಸಾಂಸಾರಿಕ ಸುಖಗಳಲ್ಲಿ ದೃಷ್ಟಿ ಇಡಬಾರದು.

**ವಶಿಷ್ಟರು ಇನ್ನೂ ಏನನ್ನು ಬೋಧಿಸಿದರೆಂದರೆ...**
**ಶ್ಲೋ॥ ಪ್ರತ್ಯಹಂ ಪ್ರತ್ಯವೇಕ್ಷತ ದೇಹಂ ನಶ್ವರಮಾತ್ಮನಃ**
**ಸಂತ್ಯಜೇತ್ಪ ಶುಭಿಸ್ತುಲ್ಯಂ ಶ್ರಯೇತ್ಪುರುಷೋಚಿತಮ್**

**(ಯೋಗವಾಶಿಷ್ಟ)**

ತಾ॥ ಪ್ರತಿದಿನ 'ಈ ಶರೀರ ನಶ್ವರವಾದದ್ದು'(ಅಶಾಶ್ವತವಾದದ್ದು' ಎಂಬ ವಿಷಯವನ್ನು ಚಿಂತನೆ ಮಾಡುತ್ತಿರಬೇಕು. ಪಶುಗಳ ಹಾಗೆ(ಅಪರಿಮಿತವಾಗಿ) ವಿಷಯ ಭೋಗಗಳಲ್ಲಿ ಆಸಕ್ತಿ ಹೊಂದಿರುವುದನ್ನು ತ್ಯಜಿಸಬೇಕು. ಅಷ್ಟೇ ಅಲ್ಲದೇ ಸತ್ಪುರುಷೋಚಿತಗಳಾದ ಸಾಧುಜನ ಸಾಂಗತ್ಯ (ಸಜ್ಜನ ಸಾಂಗತ್ಯ) ಸಚ್ಚಾಸ್ತ್ರಾದಿಗಳನ್ನು(ಸ್ವಾಧ್ಯಾಯ) ಆಶ್ರಯಿಸಬೇಕು.

**ಶ್ಲೋ॥ ಯದನಸ್ತಮನಾಯಾಸಂ ತತ್ಪದಂ ಸಾರಸಿದ್ಧಯೇ**
**ಸಾಧನೀಯಂ ಪ್ರತ್ನೇನ ಪುರುಷೇಣ ವಿಜಾನತಾ**

**(ಯೋಗವಾಶಿಷ್ಟ)**

ತಾ:– ಬುದ್ಧಿವಂತ ಮಾನವ ಪುರುಷಾರ್ಥ ಸಿದ್ಧಿಗೋಸ್ಕರ, ಅನಂತವಾದ ದುಃಖರಹಿತವಾದ ಆತ್ಮ ಪದವನ್ನು ಪ್ರಯತ್ನದಮೂಲಕ ಸಾಧಿಸಬೇಕು. ವಶಿಷ್ಟರು ಬೋಧಿಸಿರುವಂತೆ ಬಹಳ ಕಡಿಮೆ ಜನಮಾತ್ರ ಹೆಚ್ಚು ದುಃಖದಿಂದ ಕೂಡಿರುವ ಈ ಜೀವನದಲ್ಲಿನ ಅಲ್ಪ ಸ್ವಲ್ಪ ಸುಖಗಳಿಂದ ವಿರಕ್ತಿ ಹೊಂದಿ ದುಃಖರಹಿತವಾದ ಅಂದರೆ ಶಾಶ್ವತವಾಗಿ ದುಃಖಗಳಿಂದ ಹೊರಬರಬಲ್ಲ ಆತ್ಮ ಪದವನ್ನು, ಅಂದರೆ ಆತ್ಮಸಾಕ್ಷಾತ್ಕಾರವನ್ನು ಹೊಂದುವುದಕ್ಕೋಸ್ಕರ ಪ್ರಯತ್ನಿಸುತ್ತಾರೆ.



ಅಷ್ಟೇ ಅಲ್ಲ ಶ್ರೀ ಆದಿಶಂಕರಾಚಾರ್ಯರು ಭಜಗೋವಿಂದಂ ಮುಖಾಂತರ ಲೋಕಕ್ಕೆ ಬೊಧಿಸುರುವ ಈ ವಿಷಯಗಳನ್ನು ಸಹ ಅವರು ಅವಗಾಹನೆ ಮಾಡಿಕೊಳ್ಳುತ್ತಾರೆ. ಅವು ಯಾವುವೋ ತಿಳಿದುಕೊಳ್ಳೋಣ.

**"ಮಾಕುರು ಧನ ಯೌವನ ಗರ್ವಂ ಹರತಿ**
**ನಿಮೇಷತ್ಕಾಲಃ ಸರ್ವಂ। ಮಾಯ**
**ಮಯ ಮಿದ ಮಖಿಲಂ ಭುತ್ವಾ ಬ್ರಹ್ಮಾಪದಂ**
**ತ್ವಂಪ್ರವಿಶ ವಿದತ್ವಾ॥"**

ತಾ॥ "ನಿನಗೆ ಇಷ್ಟೊಂದು ಹಣವಿದೆಯೆಂದು, ನಿನ್ನ ಕೆಳಗೆ ಇಷ್ಟೊಂದು ಜನರಿದ್ದಾರೆಂದು, ನಿನಗೆ ಸುಂದರವಾದ ಯವ್ವನವಿದೆಯೆಂದು ಗರ್ವಿಸಬೇಡ. ಕಾಲ ನಿಮಿಷದಲ್ಲಿ ಸರ್ವವನ್ನೂ ಹರಿಸಿಬಿಡುತ್ತದೆ. ಕಾಣಿಸುವ ಈ ಇರುವುದೆಲ್ಲಾ ಮಾಯಾಮಯವೇ. ಈ ವಿಷಯವನ್ನು

ಸದಾ ಜ್ಞಾಪಕದಲ್ಲಿಟ್ಟು ಕೊಳ್ಳುವುದರಲ್ಲಿಯೇ 'ಬ್ರಹ್ಮಪದ'ದಲ್ಲಿ ಪ್ರವೇಶಿಸುವ ಮಾರ್ಗವಿದೆ".

ಅಷ್ಟೇ ಅಲ್ಲದೇ ಶಂಕರಾಚಾರ್ಯರು ಇನ್ನೂ

"ಅರ್ಥ ಮನರ್ಥಂ ಭಾವಯ ನಿತ್ಯಂ
ನಾಸ್ತಿ ತತಃ ಸುಖಲೇಶಃ ಸತ್ಯಮ್
ಪುತ್ರಾದಪಿ ಧನ ಭಾಜಾಂ ಭೀತಿಃ
ಸರ್ವತ್ರ್ಯೆಷಾ ನಿಹಿತಾ ರೀತಿಃ॥"

ತಾ:– "ಧನ ಯಾವಾಗಲೂ ದುಃಖಮಯವೆಂದು ಮರೆಯಬೇಡ ಅದರಲ್ಲಿ ಸ್ವಲ್ಪವೂ ಸಹ ಸುಖವಿಲ್ಲವೆಂಬ ಮಾತು ವಾಸ್ತವ. ಹಣವಂತನಿಗೆ ತನ್ನ ಮಗನಿಂದ ಸಹ ಭಯ ಉಂಟಾಗಿರುತ್ತದೆ. ಎಲ್ಲಾದರೂ ಪರಿಸ್ಥಿತಿ ಇಷ್ಟೇ".

ಶಂಕರಾಚಾರ್ಯರು ಹಣದ ಬಗ್ಗೆಯೇ ಅಲ್ಲದೇ ಮಾನವರು ಸಹಜವಾಗಿ ಮೋಹ ಪಡುವ ಕಾಮ ವಿಕಾರಗಳ ಬಗ್ಗೆ ಸಹ ವಿವರಿಸಿದ್ದಾರೆ.

"ನಾರೀ ಸ್ತನಭರ ನಾಭೀದೇಶಂ
ದೃಷ್ಟ್ವಾ ಮಾ ಗಾ ಮೋಹಾವೇಶಮ್।ಜಾ
ಏತನ್ಮಾಂಸ ವಸಾದಿ ವಿಕಾರಂ
ಮನಸಿ ವಿಷನ್ತಯ ವಾರಂ ವಾರಮ್॥"

ತಾ:– "ಯುವತಿಯರ ಸ್ತನಗಳು, ನಾಭೀಸ್ಥಳವನ್ನು ನೋಡಿ ಅಧಿಕವಾಗಿ ಮೋಹವನ್ನು ಹೊಂದಬೇಡ. ಅವೆಲ್ಲಾ ಸಹ ಮಾಂಸ ಮತ್ತು ಕೊಬ್ಬಿನ ಪದಾರ್ಥಗಳಿಂದ ನಿರ್ಮಿತವಾದಂತಹವೇ ಹೊರತು ಬೇರೇನೂ ಅಲ್ಲ. ಈ ಸತ್ಯವನ್ನು ಪ್ರತಿ ದಿನವೂ ಮನಸ್ಸಿನಲ್ಲಿ ವಿಚಾರಣೆ ಮಾಡಿಕೊಳ್ಳುತ್ತಲೇ ಇರಬೇಕು".

ಶ್ರೀ ಶಂಕರಾಚಾರ್ಯರು ಇನ್ನೂ ಏನು ಹೇಳಿದ್ದಾರೆಂದರೆ

**"ಕಾತೇ ಕಾಂತ ಧನಗತ ಚಿಂತಾ
ವಾತುಲ ಕಿಂ ತವ ನಾಸ್ತಿ ನಿಯಂತಾ।
ತ್ರಿಜಗತಿ ಸಜ್ಜನ ಸಂಗತಿ ರೇಕಾ
ಭವತಿ ಭವಾರ್ಣವತರಣೇ ನೌಕಾ॥"**

ತಾ:– "ಓ ಹುಚ್ಚನೇ! ನಿನ್ನ ಹೆಂಡತಿಯಕುರಿತು, ಹಣದ ಕುರಿತು ಏಕೆ ಅಷ್ಟೊಂದು ಚಿಂತಿಸುತ್ತೀಯ? ಧರ್ಮ ಪರಿಪಾಲನೆ ಮಾಡುವ ನಿನ್ನಷ್ಟು ಇಲ್ಲವೆಂದು ಕೊಳ್ಳುತ್ತಿದ್ದೀಯ? ತ್ರಿ ಕಾಲದಲ್ಲಿಯೂ ಸಹ ಭವಸಾಗರವನ್ನು ದಾಟಿಸಬಲ್ಲ ನೌಕೆ 'ಸಜ್ಜನ ಸಾಂಗತ್ಯ' ಮಾತ್ರವೇ ಎಂದು ತಿಳಿದುಕೋ" ಎಂದು ಹೇಳುತ್ತಾ ಇನ್ನೂ ಶಂಕರಾಚಾರ್ಯರು ಏನು ಹೇಳಿದ್ದಾರೆಂದರೆ

**"ಕಾತೇ ಕಾಂತಾ ಕಸ್ತೇ ಪುತ್ರಃ**
**ಸಂಸಾರೋಯಮತೀವ ವಿಚಿತ್ರಃ**
**ಕಸ್ಯ ತ್ವಂ ಕಃ ಕುತ ಆಯಾತಃ**
**ತತ್ತ್ವ ಚಿಂತಯ ತದಿ ಭ್ರಾತಃ!"**

ತಾ:– "ಓ ಸೋದರರನೇ! ತತ್ವವನ್ನು ವಿಚಾರಿಸು ಯಾರು ನಿನ್ನ ಹೆಂಡತಿ? ನಿನ್ನ ಪುತ್ರನ್ಯಾರು? ಈ ಸಂಸಾರ ಅತ್ಯಂತ ವಿಚಿತ್ರವಾದದ್ದು. ಇಷ್ಟಕ್ಕೂ ನೀನು ಯಾರಿಗೆ ಸೇರಿದವನು? ಎಲ್ಲಿಂದ ಇಲ್ಲಿಗೆ ಬಂದಿದ್ದೀಯ?" ಈ ತತ್ವವಿಚಾರಣೆ ಮಾಡಿದರೆ ನಿನ್ನ ಭ್ರಾಂತಿ ಮೋಹಗಳು ಛಿದ್ರಗೊಳ್ಳುತ್ತವೆ. ಹಾಗೆ ಶ್ರೀ ಆದಿಶಂಕರಾಚಾರ್ಯರು ಬೊಧಿಸಿರುವ ಸಂದೇಶವನ್ನು ಪದೇಪದೇ ಅಧ್ಯಯನ ಮಾಡುವುದರಿಂದ ಅವರು ಬೋಧಿಸಿರುವುದೆಲ್ಲಾ ಸತ್ಯವೆಂದು ತಿಳಿದುಕೊಳ್ಳುತ್ತಾರೆ. ವಾಸ್ತವವಾಗಿ ತಾನು ಯಾರೋ? ಎಲ್ಲಿಂದ ಬಂದಿದ್ದಾನೋ? ಏನು ಮಾಡಲು ಬಂದಿದ್ದಾನೋ? ತಿಳಿದುಕೊಳ್ಳಬೇಕೆಂಬ ಜಿಜ್ಞಾಸೆ ಉಂಟಾಗುತ್ತದೆ. ಅಲ್ಲಿಯವರೆಗೆ ಯಾವುಗಳಿಗೋಸ್ಕರ ಓಡಾಡುತ್ತಿದ್ದರೋ ಅವುಗಳಿಗೆಲ್ಲಾ ನಿಲ್ಲಿಸಿಬಿಡುತ್ತಾರೆ. ಆಲೋಚಿಸುತ್ತಾರೆ. ಅವುಗಳನ್ನು ತಿಳಿದುಕೊಳ್ಳುವುದಕ್ಕೋಸ್ಕರ ಧ್ಯಾನ ಮಾರ್ಗಕ್ಕೆ ಬರುತ್ತಾರೆ. ಧ್ಯಾನಸಾಧನೆ ಮಾಡುತ್ತಾ ಇನ್ನೂ ಎಷ್ಟೋ ಜನ ಯೋಗಿಗಳಬಗ್ಗೆ, ಯೋಗಿಗಳು ಮಾಡಿರುವ ಬೋಧನೆಗಳಬಗ್ಗೆ ತಿಳಿದುಕೊಳ್ಳಬೇಕೆಂದು ಪ್ರಯತ್ನಿಸುತ್ತಾರೆ.

ಅಂತಹವರು ಕೆಲವು ಆಧ್ಯಾತ್ಮಿಕ ಪುಸ್ತಕಗಳನ್ನು ಅಂದರೆ ಆತ್ಮಕ್ಕೆ ಸಂಬಂಧಿಸಿದ, ಅಂದರೆ ಆತ್ಮ ಜ್ಞಾನವನ್ನು ತಿಳಿಸುವ ಪುಸ್ತಕಗಳನ್ನು ಓದುತ್ತಾರೆ. ಆತ್ಮಜ್ಞಾನವನ್ನು ಬೊಧಿಸುವವರ ಉಪನ್ಯಾಸಗಳನ್ನು ಕೇಳುತ್ತಾ. ಆತ್ಮ ಸಾಕ್ಷಾತ್ಕಾರವನ್ನು ಹೊಂದುವುದಕ್ಕೆ ಸಂಬಂಧಿಸಿದ 'ಧ್ಯಾನ' ಸಾಧನೆ ಮಾಡುತ್ತಿರುತ್ತಾರೆ. ಅಂತಹವರಲ್ಲಿ ಬಹಳ ಸ್ವಲ್ಪ ಜನಕ್ಕೇ 'ಆತ್ಮ ಪದವನ್ನು' ಸೇರಿಕೊಳ್ಳಬೇಕೆಂಬ ವಿಪರೀತವಾದ ತಪನೆ, ಆತ್ಮದ ಬಗ್ಗೆ ತಿಳಿದುಕೊಳ್ಳಬೇಕೆಂಬ ತೀವ್ರ ಜಿಜ್ಞಾಸೆ ಇರುತ್ತದೆ ಅಂತಹವರು ತೀವ್ರವಾಗಿ 'ಧ್ಯಾನ'ಸಾಧನೆ ಮಾಡುತ್ತಾರೆ.

ಹೀಗೆ ತೀವ್ರ ಜಿಜ್ಞಾಸೆಯಿಂದ ಧ್ಯಾನ ಸಾಧನೆ ಪ್ರಾರಂಭಿಸಿ ಧ್ಯಾನಸಾಧನೆಯೊಂದಿಗೆ, ಸ್ವಾಧ್ಯಾಯ, ಸಜ್ಜನ ಸಾಂಗತ್ಯದಿಂದ ಮಮುಕ್ಷತ್ವಕ್ಕೆ ದಾರಿ ಮಾಡಿಕೊಡುತ್ತದೆ. ಇವರಿಗೆ ಪ್ರಾಪಂಚಿಕ ವಿಷಯಗಳ ಬಗ್ಗೆ ಆಸಕ್ತಿ ಸಂಪೂರ್ಣವಾಗಿ ಕಡಿಮೆಯಾಗುತ್ತದೆ ಹಣ ಸಂಪಾದಿಸಬೇಕೆಂದು, ಭೂಮಿಗಳು, ಬಂಗಲೆಗಳನ್ನು ಸಂಪಾದಿಸಬೇಕೆಂದು, ಬಂಗಾರ, ವಡವೆ, ಮಕ್ಕಳು, ನನ್ನ ಹೆಂಡತಿ, ನನ್ನ ಗಂಡ, ನನ್ನ ಬಂಧುಗಳು, ನನ್ನ ಸ್ನೇಹಿತರು ಎಂಬ ಮಮಕಾರ ಪೂರ್ತಿಯಾಗಿ ತೊಲಗಿಹೋಗುತ್ತದೆ. ಅವರಲ್ಲಿ ಯಾವುದೇ ಆಸೆಗಳು, ಕೋರಿಕೆಗಳು ಇರುವುದಿಲ್ಲ. ಏನಿದ್ದರೆ ಅದರೊಂದಿಗೇ ಸಂತೃಪ್ತಿಪಡುತ್ತಾರೆ. ಇತರರನ್ನಾಗಲೀ, ಇತರರವುಗಳನ್ನಾಗಲೀ ನೋಡಿ ಅಸೂಯೆ ಪಡುವುದಿಲ್ಲ. ಆಸೆ ಪಡುವುದಿಲ್ಲ. ಕಾರಣ ತನಗೆ ಬೇಕಾದದ್ದು ಶಾಶ್ವತವಾಗಿ ದುಃಖದಿಂದ ಹೊರಬೀಳುವುದು ಅದಕ್ಕೆ ತಾನು ಹೊಂದಬೇಕಾದದ್ದು 'ಆತ್ಮ ಪದ' ಎಂಬ ವಿಷಯವನ್ನು ಅವರು

ಅರ್ಥಮಾಡಿಕೊಳ್ಳುತ್ತಾರೆ. ಅದೇ ಅವರ ಜೀವನ ಧ್ಯೇಯವಾಗಿ ಇಟ್ಟುಕೊಳ್ಳುತ್ತಾರೆ. ಆದ್ದರಿಂದ ಇವೆಲ್ಲವುಗಳನ್ನು ತೃಣಪ್ರಾಯವಾಗಿ ಭಾವಿಸುತ್ತಾರೆ

ಅಷ್ಟೇ ಅಲ್ಲ ಅವರಲ್ಲಿ ನೆಮ್ಮದಿಯಾಗಿ ನಾನು ಇಂತಹ ಕುಲ, ಇಂತಹ ಮತ, ಇಂತಹ ಪ್ರಾಂತ್ಯ, ಇಂತಹ ದೇಶ ಎಂಬ ಭಾವನೆ ಸಹ ಪೂರ್ತಿಯಾಗಿ ತೊಲಗಿಹೋಗುತ್ತದೆ. ನಾನು ಅದು ಸಾಧಿಸಿದ್ದೇನೆ, ಇದು ಸಾಧಿಸಿದ್ದೇನೆ, ನಾನು ಅಂತಹವನು, ಇಂತಹವನು, ಇಂತಹ ಶ್ರೇಷ್ಠನು, ಇಷ್ಟು ಘನಕಾರ್ಯಮಾಡಿದ್ದೇನೆ. ಅವರು ನನಗಿಂತ ಕಡಿಮೆಯವರು, ಅವರೆಲ್ಲರಿಗಿಂತ ನಾನೇ ಅಧಿಕನು ಎಂಬಂತಹ ಅಹಂಕಾರ ಭಾನೆಗಳೆಲ್ಲಾ ಪೂರ್ತಿಯಾಗಿ ಹೋಗುತ್ತವೆ. ಅಂತಹ ಸ್ಥಿತಿಯಲ್ಲಿ ಅವರಿಂದಯಾರಿಗೂ ಅಹಂಕಾರ ಉಂಟಾಗದು, ಯಾರಿಗೂ ಅಪಕಾರ ಮಾಡುವುದಿಲ್ಲ. ಅವರನ್ನು ನೋಡಿ ಭಯಪಡುವುದಿಲ್ಲ. ಕೊನೆಗೆ ಪ್ರಾಣಿಗಳು ಸಹ ಅವರನ್ನು ನೋಡಿ ಭಯಪಡುವುದಿಲ್ಲ. ಕಾರಣ ಅವರು ಯಾರಿಗೂ ಅಪಕಾರ ಮಾಡುವುದಿಲ್ಲವಾದ್ದರಿಂದ ಅದೇರೀತಿ ತಾವೂ ಸಹ ಯಾರಿಗೂ ಭಯಪಡುವುದಿಲ್ಲ, ಯಾವುದಕ್ಕೂ ಭಯಪಡುವುದಿಲ್ಲ ಏನೇ ಆದರೂ ನೋವು ಪಡುವುದಿಲ್ಲ, ಯಾವುದನ್ನೂ ಹಿಡಿಸಿಕೊಳ್ಳುವುದಿಲ್ಲ.

ಅಷ್ಟೇ ಅಲ್ಲ ಹಿಂದಿನದರ ಬಗ್ಗೆ ಆಲೋಚಿಸುವುದಿಲ್ಲ, ಜೀವನದಲ್ಲಿ ಹಿಂದೆ ನಡೆದ ಸಂಘಟನೆಗಳು, ವಿಷಯಗಳನ್ನು ಪೂರ್ತಿಯಾಗಿ ಮರೆತುಹೋಗುತ್ತಾರೆ. ಜ್ಞಾಪಕ ಬಂದರೂ ಹಿಡಿಸಿಕೊಳ್ಳುವುದಿಲ್ಲ. ಏನು ಆಗಬೇಕೋ ಅದೇ ಆಗುತ್ತದೆ ಎಂಬ ಸ್ಥಿತಿಯಲ್ಲಿ ಇರುತ್ತಾರೆ, ಎಲ್ಲವುಗಳನ್ನು ಸ್ವೀಕರಿಸುವ ಸ್ಥಿತಿಯಲ್ಲಿ ಇರುತ್ತಾರೆ.

ಸದಾ ತಾವು ಮಾಡುವ ಧ್ಯಾನ ಸಾಧನೆಯ ಮೇಲೆಯೇ ದೃಷ್ಟಿ ಇರಿಸುತ್ತಾರೆ. ಪುಸ್ತಕಗಳನ್ನು ಓದುತ್ತಾ, ಜ್ಞಾನ ಸಂದೇಶಗಳನ್ನು ಕೇಳುತ್ತಾ, ಜ್ಞಾನವನ್ನು ಅಭಿವೃದ್ಧಿ ಪಡಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಾರೆ. ಅಂತಹವರು ಏನು ಮಾಡಿದರೂ ಇತರರಿಗೆ, ಇತರ ಜೀವಿಗಳಿಗೆ ಉಪಕಾರವಾಗುವ ಕೆಲಸಗಳನ್ನೇ ಮಾಡುತ್ತಾರೆ ಹೊರತು ಅಪರಾರ ಉಂಟುಮಾಡುವ ಕೆಲಸಗಳನ್ನು ಮಾಡುವುದಿಲ್ಲ. ಅಂತಹ ಸ್ಥಿತಿಯಲ್ಲಿರುವಾಗ, ಅವರನ್ನು ಮುಮುಕ್ಷು ಎನ್ನುತ್ತಾರೆ ಅಂತಹ ಸ್ಥಿತಿಯಲ್ಲಿರುವಾಗ, ಅವರು ಧ್ಯಾನಸಾಧನೆ ತೀವ್ರ ಸ್ಥಿತಿಯಲ್ಲಿದ್ದು ಸಾಧನೆ ಪರಾಕಾಷ್ಟೆಗೆ ಸೇರಿಕೊಂಡಾಗ ಅವರಲ್ಲಿ ಅವರಿಗೇ ಆಶ್ಚರ್ಯಉಂಟುಮಾಡುವ ಬದಲಾವಣೆಗಳು ಜಾಗ ಮಾಡಿಕೊಳ್ಳುತ್ತವೆ. ಯಾವಾಗಲೂ ತಿಳಿದಿರದ ವಿಷಯಗಳು ತಿಳಿಯುತ್ತವೆ. ಯಾವಾಗಲೂ ಮಾಡಲಾರದಂತಹ ಕೆಲಸಗಳನ್ನು ಮಾಡುತ್ತಿರುತ್ತಾರೆ. ಅಂತಹವು ನಡೆಯುತ್ತಿರುವಾಗ ಮೊದಲಿಗೆ ತಮಗೆ ತಾವು ಸಹಜವಾಗಿಯೇ ಆಶ್ಚರ್ಯ ಪಡುವುದು ನಡೆಯುತ್ತದೆ, ಕೆಲವುಗಳನ್ನು ನಂಬಲಾರರು ಸಹ. ಹೀಗೆ ಅವರಿಗೆ ಎಷ್ಟೋ ವಿಷಯಗಳು ತಿಳಿಯುತ್ತವೆ. ಎಷ್ಟೋ ಇಲ್ಲದ ಶಕ್ತಿಗಳು ಉಂಟಾಗುತ್ತಿರುತ್ತವೆ.

ಹಾಗೆ ಎಂದೂ ನೋಡದ ದೃಶ್ಯಗಳು ಅಂದರೆ ಈ ಎರಡೂ ಕಣ್ಣುಗಳಿಂದ ನೋಡಲಾರದ ದೃಶ್ಯಗಳನ್ನು ಅಲ್ಲಿಯೇ ಕುಳಿತು ನೋಡಬಲ್ಲರು ಅಂದರೆ ಪ್ರಪಂಚದಲ್ಲಿ ಯಾವುದನ್ನಾದರೂ, ಯಾವ ಪ್ರದೇಶವನ್ನಾದರೂ, ಅಂದರೆ ಸೃಷ್ಟಿಯಲ್ಲಿನ ಎಷ್ಟೋ

ಪ್ರದೇಶಗಳು, ಎಷ್ಟೋ ಲೋಕಗಳಲ್ಲಿನ ಅದ್ಭುತಗಳು, ವಿಷಯಗಳನ್ನು ನೋಡುತ್ತಾರೆ ಹಾಗೆ ಈ ಎರಡೂ ಕಣ್ಣುಗಳಿಂದ ನೋಡಲಾರದಂಹವುಗಳನ್ನು ನೋಡಬಲ್ಲ ನೇತ್ರವನ್ನೇ 'ದಿವ್ಯ ನೇತ್ರ' ಅಲ್ಲದೇ 'ಮೂರನೇ ಕಣ್ಣು' ಎಂದೂ ಸಹ ಕರೆಯುತ್ತಾರೆ. ಆ ದೃಷ್ಟಿಯನ್ನು 'ದಿವ್ಯ ದೃಷ್ಟಿ' ಎನ್ನುತ್ತಾರೆ.

ಹೀಗೆ 'ದಿವ್ಯದೃಷ್ಟಿ'ಯನ್ನು ಸಂಪಾದಿಸಿಕೊಂಡವರ ಶಕ್ತಿ ಹೆಚ್ಚಾಗುತ್ತಾ ಅವರ ದಿವ್ಯನೇತ್ರದಿಂದ ನೋಡಬಲ್ಲ ಪರಿಧಿ ಹೆಚ್ಚುತ್ತಾ ಇರುತ್ತದೆ. ಹೀಗೆ ಅವರು ಹಿಂದಿನ ಜನ್ಮಕ್ಕೆ ಸಂಬಂಧಿಸಿದ ಕೆಲವು ವಿಷಯಗಳು ನೂರು ವರ್ಷಗಳ ಹಿಂದಕ್ಕೆ... ಇನ್ನೂ ಶಕ್ತಿ ಹೆಚ್ಚಾದರೆ ಕೆಲವು ಸಾವಿರವರ್ಷಗಳ ಹಿಂದಕ್ಕೆ ಸಹ ನೋಡಬಲ್ಲರು. ಹೀಗೆ ಪೂರ್ವಕ್ಕೆ ಸಂಬಂಧಿಸಿದ ವಿಷಯಗಳೇ ಅಲ್ಲದೆ ಭವಿಷ್ಯತ್ತಿನ ಬಗ್ಗೆ, ಭವಿಷ್ಯತ್ತಿನಲ್ಲಿ ನಡೆಯಬಲ್ಲ ವಿಷಯಗಳನ್ನು ಸಹ ನೋಡಬಲ್ಲರು, ತಿಳಿದುಕೊಳ್ಳಬಲ್ಲರು. ಅವರ ಶಕ್ತಿಯನ್ನಾಧರಿಸಿ ಕೆಲವು ನೂರು ವರ್ಷಗಳೇ ಅಲ್ಲ. ಕೆಲವು ಸಾವಿರ ವರ್ಷಗಳ ನಂತರ ನಡೆಯಬಲ್ಲಂತಹವುಗಳನ್ನು ಸಹ ತಿಳಿದುಕೊಳ್ಳಬಲ್ಲರು.

ಇಂತಹ ಗುಂಪಿಗೆ ಸೇರಿದವರೇ "ಶ್ರೀ ಪೋತುಲೂರಿ ವೀರಬ್ರಹ್ಮೇಂದ್ರಸ್ವಾಮಿ, ನೋಸ್ಟ್ರಡಾಮಸ್"ರಂತಹವರು. ಹಾಗೆಯೇ ಅವರ ಮೂರನೇ ಕಣ್ಣು ಅಂದರೆ ದಿವ್ಯದೃಷ್ಟಿಗೆ ಇರುವ ಶಕ್ತಿಯನ್ನಾಧರಿಸಿ ತಮ್ಮ ಹಿಂದಿನ ಜನ್ಮಗಳನ್ನು ತಿಳಿದುಕೊಳ್ಳಬಲ್ಲವರು ಇದ್ದಾರೆ. ಅದೇರೀತಿ ಎಲ್ಲರ ಹಿಂದಿನ ಜನ್ಮಗಳ ಬಗ್ಗೆ ಸಹ ತಿಳಿದುಕೊಳ್ಳಬಲ್ಲಂತಹವರು ಸಹ ಇದ್ದಾರೆ.

ಈ ವಿಷಯವನ್ನೇ ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದ್ದಾನೆ. ಅವರು ಏನೆಂದಿದ್ದಾರೆ ಅಂದರೆ

**ಶ್ಲೋ॥ ಬಹೂನಿ ಮೇವ್ಯತೀತಾನಿ ಜನ್ಮಾನಿ ತವ ಚಾರ್ಜುನ।**
**ತಾ ನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಸ್ತಪ॥**



**(ಭ.ಗೀ. 4–5)**

ತಾ॥ "ಓ ಅರ್ಜುನಾ! ನಿನಗೂ ನನಗೂ ಇಲ್ಲಿಯವರೆಗೆ ಅನೇಕ ಜನ್ಮಗಳು ಕಳೆದುಹೋಗಿವೆ ಅವೆಲ್ಲವುಗಳನ್ನು ನಾನು ಬಲ್ಲೆ ಆದರೆ ನಿನಗೆ ತಿಳಿದಿಲ್ಲ". ಮೇಲಿನ ಸಂದೇಶವನ್ನಾಧರಿಸಿ ಯೋಗೀಶ್ವರನಾದ ಶ್ರೀ ಕೃಷ್ಣನಿಗೆ ದಿವ್ಯ ದೃಷ್ಟಿಯಿದೆ ಎಂದು ಸಹ ತಿಳಿಯುತ್ತದೆ. ಮಾನವನಾದ ಅರ್ಜುನನಿಗೆ ಇಲ್ಲವೆಂದು ಸಹ ತಿಳಿಯುತ್ತದೆ. ಇದನ್ನಾಧರಿಸಿ ದಿವ್ಯನೇತ್ರವನ್ನು ಸಂಪಾದಿಸಿಕೊಂಡವರು ಇರುವ ಜಾಗದಿಂದ

ಅಲುಗಾಡದೇ ಪ್ರಪಂಚದಲ್ಲಿಯೇ ಅಲ್ಲ ಸೃಷ್ಟಿಯಲ್ಲಿ ಏನನ್ನಾದರೂ ನೋಡಬಲ್ಲರು ಯಾವುದನ್ನಾದರೂ ತಿಳಿದುಕೊಳ್ಳಬಲ್ಲರೆಂದು ತಿಳಿಯುತ್ತದೆ.

ಅದೇ ರೀತಿ ಅಂತಹ ಸಾಧಕರು ಮತ್ತಷ್ಟು ಶಕ್ತಿಗಳನ್ನು ಸಹ ಪ್ರದರ್ಶಿಸಬಲ್ಲರು. ಅವರು ಇರುವ ಜಾಗದಿಂದ ಅಲುಗಾಡದೇ ಶರೀರದಿಂದ ಹೋಗಬಲ್ಲರು. ಭೂಲೋಕದಲ್ಲಿಯೇ ಅಲ್ಲ ಸೃಷ್ಟಿಯಲ್ಲಿನ ಯಾವ ಲೋಕಗಳಾದರೂ ಹೋಗಬಲ್ಲರು. ಇದನ್ನೇ "ಸೂಕ್ಷ್ಮಶರೀರ ಯಾನ" ಎನ್ನುತ್ತಾರೆ. ಹೀಗೆ ಪ್ರಯಾಣಿಸುವುದರಿಂದ ಅವರು ಎಷ್ಟೋ ಸೃಷ್ಟಿ ರಹಸ್ಯಗಳನ್ನು ತಿಳಿದುಕೊಳ್ಳಲಾರದ ಎಷ್ಟೋ ಜನ ಸೂಕ್ಷ್ಮಲೋಕ ವಾಸಿಗಳನ್ನು ಸಹ ಭೇಟಿಯಾಗುತ್ತಾರೆ. ಇದರಿಂದ ಅವರು ಸೃಷ್ಟಿಗೆ ಸಂಬಂಧಿಸಿದ ಎಷ್ಟೋ ಜ್ಞಾನ ಸಂಪಾದಿಸಿಕೊಳ್ಳುತ್ತಾರೆ. ಈ ಜ್ಞಾನವನ್ನೆಲ್ಲಾ ಅನುಭವಪೂರ್ವಕವಾಗಿ ತಿಳಿದುಕೊಳ್ಳುತ್ತಾರೆ.

ಅಷ್ಟೇ ಅಲ್ಲ ಈ ಕಾಣಿಸುವ ದೇಹದಿಂದ ಸೂಕ್ಷ್ಮಶರೀರ ಹೊರಗೆ ಬಂದ ತಕ್ಷಣವೇ ಈ ದೇಹ ನಾನಲ್ಲ, ಆತ್ಮ ಎಂದು ಅನುಭವಪೂರ್ಕವಾಗಿ ತಿಳಿದುಕೊಳ್ಳುತ್ತಾರೆ. ಅಂದರೆ ತಾನು ಯಾರೋ ತಿಳಿದುಕೊಳ್ಳುತ್ತಾರೆ, ಹೀಗೆ ಎಷ್ಟೋ ಲಾಭಗಳು "ಸೂಕ್ಷ್ಮಶರೀರ ಪ್ರಯಾಣ"ದಿಂದ ಅವರಿಗೆ ಉಂಟಾಗುತ್ತದೆ.

ಮೇಲಿನ ಶಕ್ತಿಗಳೇ ಅಲ್ಲದೇ (1) ವಿಶ್ವಮಯ ಪ್ರಾಣಶಕ್ತಿ, (2) ಸಿಲ್ವರ್ ಕಾರ್ಡ್ ಅಂದರೆ ಭೌತಿಕ ಶರೀರವನ್ನು ಸೂಕ್ಷ್ಮಶರೀರವನ್ನು ಜೋಡಿಸುವ ಎಳೆ, (3) ಎಥೆರಿಕ್ ಬಾಡಿ ಅಂದರೆ ಪ್ರಾಣಮಯ ಕೋಶ, (4) ಟೆಲಿಪತಿ, (5) ಕ್ಲಿಯರ್‌ವಾಯನ್ಸ್ ಅಂದರೆ ದಿವ್ಯದರ್ಶನ, (6) ಸೈಕೋಮೆಟ್ರ ಅಂದರೆ ಸ್ಪರ್ಶಗ್ರಹಣವಿದ್ಯೆ, (7) ಕ್ಲಿಯರ್ ಆಡಿಯನ್ಸ್ ಅಂದರೆ ದಿವ್ಯಶ್ರವಣದಂತಹ ಅನೇಕ ಶಕ್ತಿಗಳನ್ನು ಸಹ ಹೊಂದುವ ಅವಕಾಶವಿದೆ ಅಂದರೆ ಅಂತಹ ಶಕ್ತಿಗಳು ಅವಶ್ಯಕತೆಯನ್ನಾಧರಿಸಿ ಅವರಿಗೆ ಕೊಡಲ್ಪಡುತ್ತವೆ. ಅವರಿಗೆ ಏನು ಅವಶ್ಯಕವೋ ಅವುಗಳನ್ನೇ ಕೊಡಲ್ಪಡುತ್ತವೆ.

ಅಂತಹವರು ಅಂದರೆ ಅಂತಹ ಪ್ರಯತ್ನ, ಸಾಧನೆ ಮಾಡುವವರು ಈ ಶಕ್ತಿಗಳೊಂದಿಗೆ ಒಂದೊಂದು ಸಾರಿ ಕೆಲವು ಸಿದ್ಧಿಗಳನ್ನು ಸಹ ಹೊಂದಲ್ಪಡುತ್ತಾರೆ. ಹಾಗೆ ಹೊಂದುವುದನ್ನೇ ಸಿದ್ಧಿತ್ವ ಎನ್ನುತ್ತಾರೆ. ಅಂತಹ ಸಿದ್ಧಿಗಳನ್ನು ಹೊಂದಿದವರನ್ನು ಸಿದ್ಧರು ಎಂದೂ ಸಹ ಕರೆಯುತ್ತಾರೆ. ಪುರಾಣಗಳಲ್ಲಿ ಇಂತಹ ಸಿದ್ಧಿಗಳನ್ನು 8 ವಿಧಗಳಾಗಿ ಹೆಸರಿಸಿದ್ದಾರೆ. ಅವುಗಳನ್ನೇ 'ಅಷ್ಟಸಿದ್ಧಿಗಳು' ಎಂದೂ ಸಹ ಕರೆಯುತ್ತಾರೆ. ಅವು ಯಾವುವೆಂದರೆ?

1) ಅಣಿಮ :– ಅಂದರೆ ಸೂಕ್ಷ್ಮಾತಿ ಸೂಕ್ಮರೂಪವನ್ನು ಧರಿಸುವಂತಹದ್ದು.

2) ಮಹಿಮ:– ಅಂದರೆ ಅತಿ ದೊಡ್ಡರೂಪವನ್ನು ಧರಿಸುವಂತಹದ್ದು.

3) ಗರಿಮ:– ಅಂದರೆ ಭಾರವಾಗುವುದು.

4) ಲಘಿಮ:– ಅಂದರೆ ತುಂಬಾ ಹಗುರವಾಗುವುದು.

5) ಪ್ರಾಪ್ತಿ:– ಅಂದರೆ ಹೊಂದಬೇಕಾದಂತಹವುಗಳನ್ನು ಹೊಂದುವುದು.

6) ಪ್ರಕಾಮ್ಯ:– ಅಂದರೆ ವಿಶೇಷವಾದ ಕೋರಿಕೆ ನೆರವೇರಿಸಿಕೊಳ್ಳುವಂತಹದ್ದು (ಹಿಡಿತ).

7) ಈಶತ್ವ:– ಅಂದರೆ ಎಲ್ಲರ ಮೇಲೆ ಅಧಿಪತ್ಯ ಸಂಪಾದಿಸುವುದು.

8) ವಶತ್ವ:– ಅಂದರೆ ಎಲ್ಲರನ್ನು ವಶಪಡಿಸಿಕೊಳ್ಳುವಂತಹದ್ದು.

ಅಂತಹ ಸಿದ್ಧಿಗಳನ್ನು ರಾಮಾಯಣದಲ್ಲಿ ಆಂಜನೇಯ ಸ್ವಾಮಿ ಪ್ರದರ್ಶಿಸಿರುವಂತಹದ್ದು ನಮಗೆಲ್ಲರಿಗೂ ಗೊತ್ತಿದೆ. ಹೀಗೆ ಧ್ಯಾನ ಸಾಧನೆ ಮಾಡುವವರು ಮಾನವ ಇಂದ್ರಿಯಗಳಿಗೆ ಸಾಧ್ಯವಾಗದ ಅತೀಂದ್ರಿಯ ಶಕ್ತಿಗಳನ್ನು ಸಂಪಾದಿಸುವುದರಿಂದ ಅತೀಂದ್ರಿಯ ಜ್ಞಾನವನ್ನು ಸಂಪಾದಿಸಿಕೊಳ್ಳುವ ಅವಕಾಶ ಉಂಟಾಗುತ್ತದೆ. ಸಾಮಾನ್ಯರು ತಿಳಿದುಕೊಳ್ಳಲಾರದ ವಿಷಯಗಳನ್ನು ತಿಳಿದುಕೊಳ್ಳುತ್ತಾರೆ. ಹಾಗೆ ಎಷ್ಟೋ ಜ್ಞಾನವನ್ನು ಸಂಪಾದಿಸಿಕೊಳ್ಳುತ್ತಾರೆ.



ಇವೆಲ್ಲವುಗಳಿಂದ ಸೃಷ್ಟಿಗೆ ಸಂಬಂಧಿಸಿದ, ಸೃಷ್ಟಿಯಲ್ಲಿನ ಅನೇಕಾನೇಕ ಲೋಕಗಳಿಗೆ ಸಂಬಂಧಿಸಿದ ವಿಷಯಗಳು, ರಹಸ್ಯಗಳು, ಜ್ಞಾನವನ್ನು ತಿಳಿದುಕೊಳ್ಳುವ ಅವಕಾಶ ಉಂಟಾಗುತ್ತದೆ ಹಾಗೆ ತಮಗೆ ಇದಕ್ಕಿಂತ ಮುಂಚೆ ತಿಳಿಯದ, ಸಾಮಾನ್ಯರು ತಿಳಿದುಕೊಳ್ಳಲಾಗದ ವಿಷಯಗಳನ್ನು ತಿಳಿದುಕೊಂಡು ಎಷ್ಟೋ ಜ್ಞಾನವನ್ನು ಸಂಪಾದಿಸಿಕೊಳ್ಳುತ್ತಾರೆ. ಇದರ ಮೂಲಕ ತಮ್ಮ ಜೀವನದ ಪರಮಾರ್ಥವಾದ "ಆತ್ಮಪದವನ್ನು" ಸಾಧಿಸಲ್ಪಡುತ್ತಾರೆ. ತಾವು ಇಷ್ಟುಕಾಲ ಎದುರು ನೋಡುತ್ತಿರುವ, ಕೋರಿಕೊಳ್ಳುತ್ತಿರುವ ಮುಕ್ತಿ, ಅಂದರೆ ದುಃಖದಿಂದ ಶಾಶ್ವತವಾಗಿ ಹೊರಬರುತ್ತಾರೆ.

ಮೇಲಿನ ವಿಷಯಗಳನ್ನಾಧರಿಸಿ ಸೂಕ್ಷ್ಮವಾಗಿ ನಾವು ತಿಳಿದುಕೊಳ್ಳಬೇಕಾದದ್ದು ಏನೆಂದರೆ ಮಾನವರು ತಮ್ಮ ಕಷ್ಟಗಳಿಂದ, ಸಮಸ್ಯೆಗಳಿಂದ ಹೊರಬರಬೇಕೆಂಬ ತಪನೆಯಿಂದ ಪ್ರಾಪಂಚಿಕ ವಿಷಯಗಳ ಬಗ್ಗೆ ವಿರಕ್ತಿ ಹೊಂದಿ, ವಿಷಯಭೋಗಗಳ ಬಗ್ಗೆ ಆಸಕ್ತಿಯನ್ನು ಬಿಟ್ಟು, "ಆತ್ಮಜ್ಞಾನವನ್ನು", "ಆತ್ಮ ಸಾಕ್ಷಾತ್ಕಾರವನ್ನು" ಹೊಂದಲು

ತೀವ್ರವಾದ ಕೃಷಿ ಅಂದರೆ ಧ್ಯಾನ ಸಾಧನೆ ಮಾಡುತ್ತಿರುವಾಗ ಸಹಜವಾಗಿಯೇ ಅವರ ಗುರಿ ಸಾಧಿಸಲು ಬೇಕಾದ ಸಹಕಾರ ಅವರಿಗೆ ಸೃಷ್ಟಿಯಿಂದ ಲಭಿಸುತ್ತದೆ.

ಆ ರೀತಿ ಅವರ ಸಾಧನೆಯ ತೀವ್ರತೆಯನ್ನಾಧರಿಸಿ ಅವರಿಗೆ ಬೇಕಾದ, ಅವರು ಹೊಂದಬೇಕಾದ ಜ್ಞಾನಕ್ಕೆ ಬೇಕಾದ ಶಕ್ತಿಗಳಾಗಲೀ, ಸಿದ್ಧಿಗಳಾಗಲೀ ಯಾವುದು ಅವಶ್ಯಕವೋ ಅದು ಸ್ವಯಂಚಾಲಿತವಾಗಿ(ಆಟೋಮ್ಯಾಟಿಕ್) ಸೃಷ್ಟಿಯಿಂದ ಒದಗಿಸಲ್ಪಡುತ್ತವೆ. ಅಂದರೆ ಅಂತಹ ಶಕ್ತಿಗಳು ಸಾಧನೆ ಮಾಡುತ್ತಿರುವಾಗ ಸಹಜವಾಗಿಯೇ ಬರುತ್ತವೆ. ಅವುಗಳಿಗೋಸ್ಕರ ಅವರು ಪ್ರತ್ಯೇಕವಾಗಿ ಪ್ರಯತ್ನಿಸಬೇಕಾದ ಅವಶ್ಯಕತೆ ಇಲ್ಲ. ಕೋರಿಕೊಳ್ಳಬೇಕಾದ ಅವಶ್ಯಕತೆ ಸಹ ಇರುವುದಿಲ್ಲ, ಬರುವುದಿಲ್ಲ. ಕಾರಣ ಸೃಷ್ಟಿಯಲ್ಲಿ **“ಮಾಡಬೇಕಾದ ಸಾಧನೆ ಮಾಡುತ್ತಿದ್ದರೆ ಹೊಂದಬೇಕಾದಂತಹವುಗಳನ್ನು ಆಟೋಮ್ಯಾಟಿಕ್‌ಹಾಗಿ ಹೊಂದುತ್ತಿರುತ್ತಾರೆ.”**

ಹೀಗೆ ಧ್ಯಾನ ಸಾಧನೆ ಮಾಡುವವರು ಸಾಧನೆಯ ತೀವ್ರತೆಯನ್ನಾಧರಿಸಿ ಸಹಜವಾಗಿ ಹೊಂದುವಂತಹವೇ ಮೇಲೆ ಹೆಸರಿಸಲ್ಪಟ್ಟ ಶಕ್ತಿಗಳು. ಅಷ್ಟೇ ಅಲ್ಲ ಕೆಲವರು ಕೆಲವು ಸಿದ್ಧಿಗಳನ್ನು ಸಹ ಸಂಪಾದಿಸಿಕೊಳ್ಳುತ್ತಾರೆ. ಇವೆಲ್ಲ ತಮ್ಮ ಲಕ್ಷ್ಯಗಳನ್ನು ಸಾಧಿಸಿಕೊಳ್ಳುವುದಕ್ಕೋಸ್ಕರವೇ ಹೊರತು ಇನ್ಯಾವುದಕ್ಕೋಸ್ಕರವೂ ಅಲ್ಲ. ಬುದ್ಧಿವಂತರು ಹೀಗೆ ಸಂಪಾದಿಸಿಕೊಂಡ ಶಕ್ತಿಗಳಿಂದ, ಸಿದ್ಧಿಗಳಿಂದ ತಮ್ಮ ಲಕ್ಷ್ಯವನ್ನು ಸುಲಭವಾಗಿ ಸಾಧಿಸಿಕೊಳ್ಳುತ್ತಾರೆ, ಗುರಿಯನ್ನು ಮುಟ್ಟುತ್ತಾರೆ.

ಆದರೆ ಹೀಗೆ ಸಾಧಿಸಿದವರಲ್ಲಿ ಕೆಲವರು ಅಂತಹ ಶಕ್ತಿಗಳು, ಸಿದ್ಧಿಗಳನ್ನು ಸಾಧಿಸಿದಾಗ ಅವುಗಳನ್ನು ನೋಡಿ ಗರ್ವದಿಂದ, ಅಹಂಕಾರದಿಂದ ಲಕ್ಷ್ಯವನ್ನು ಮರೆತು ಅವುಗಳನ್ನು ತಮ್ಮ ಗುರಿ ಸಾಧನೆಗೆ ಉಪಯೋಗಿಸಿಕೊಳ್ಳದೇ ತಮ್ಮ ಸ್ವಾರ್ಥ ಪ್ರಯೋಜನೆಗಳಿಗೆ ಉಪಯೋಗಿಸುತ್ತಾರೆ ವಿಷಯ ಭೋಗಗಳ ಮೇಲೆ ಆಸಕ್ತಿ ಪ್ರದರ್ಶಿಸುತ್ತಿರುತ್ತಾರೆ ಎಲ್ಲರಿಗಿಂತ ಶ್ರೇಷ್ಠರೆನ್ನಿಸಿಕೊಳ್ಳಬೇಕೆಂದುಕೊಳ್ಳುತ್ತಾರೆ. ಆ ಶಕ್ತಿಗಳನ್ನು ಸೃಷ್ಟಿವಿರುದ್ಧವಾದ ಕಾರ್ಯಗಳಿಗೆ ಉಪಯೋಗಿಸುತ್ತಾರೆ. ಸೃಷ್ಟಿವಿರುದ್ಧವಾದ ಕೆಲಸಗಳನ್ನು ಮಾಡುತ್ತಾರೆ. ಸೃಷ್ಟಿವಿರುದ್ಧವಾಗಿ ಪ್ರವರ್ತಿಸುತ್ತಾರೆ. ತಮ್ಮ ಶಕ್ತಿಗಳನ್ನು ಪ್ರದರ್ಶಿಸುತ್ತಾ ಎಲ್ಲರಿಗೂ ಮೋಸ ಮಾಡುತ್ತಾರೆ. ಇತರರಿಗೆ ತಮ್ಮ ಸ್ವಾರ್ಥ ಪ್ರಯೋಜನಗಳಿಗೆ ಬಳಸಿಕೊಳ್ಳುತ್ತಾರೆ. ಅವರನ್ನು ಹೀಯಾಳಿಸಿದವರಿಗೆ ತಮ್ಮ ಶಕ್ತಿಗಳನ್ನು ತೋರಿಸಿ ಹೆದರಿಸುತ್ತಾರೆ, ವೇದನೆ ಕೊಡುತ್ತಾರೆ, ವಿಧವಿಧವಾದ ತೊಂದರೆಗಳಿಗೆ ಗುರಿಪಡಿಸುತ್ತಾರೆ. ಮಾಯೆ ಮಾತುಗಳಿಂದ ಮಂತ್ರ ತಂತ್ರಗಳೆನ್ನುತ್ತಾ ವಂಚಿಸುತ್ತಾರೆ. ಎಲ್ಲಾ ವಿಧಗಳಲ್ಲಿಯೂ ಸೃಷ್ಟಿ ವಿರುದ್ಧವಾಗಿ ಪ್ರವರ್ತಿಸುತ್ತಾರೆ.

ಅಂತಹವರು ತಮ್ಮ ಶಕ್ತಿಗಳನ್ನು ಲೋಕಕಲ್ಯಾಣಕರವಾದ ಕೆಲಸಗಳಿಗೆ ಉಪಯೋಗಿಸುವುದಿಲ್ಲ. ಲೋಕ ಕ್ಷೇಮಕ್ಕೋಸ್ಕರ ಉಪಯೋಗಿಸುವುದಿಲ್ಲ. ಹೀಗೆ ಪ್ರವರ್ತಿಸುವವರಿಗೆ ಸಹಜವಾಗಿಯೇ ಸೃಷ್ಟಿಯಿಂದ ಸಂಪಾದಿಸಿಕೊಂಡ ಶಕ್ತಿಗಳು, ಸಿದ್ಧಿಗಳು ಅವರಿಂದ ಹಿಂದಕ್ಕೆ ತೆಗೆದುಕೊಳ್ಳಲ್ಪಡುತ್ತವೆ. ಅಂದರೆ ಅವರಿಗೆ ಆ ಶಕ್ತಿಗಳೆಲ್ಲಾ

ಮಾಯವಾಗುತ್ತವೆ. ಆ ಸಿದ್ಧಿಗಳು ಕೆಲಸ ಮಾಡುವುದಿಲ್ಲ. ಅವರು ಪುನಃ ಸಾಮಾನ್ಯ ಮನುಷ್ಯರಾಗಿಬಿಡುತ್ತಾರೆ.

ಏಕೆಂದರೆ ಸಹಜವಾಗಿ ಅಂತಹ ಶಕ್ತಿಗಳನ್ನು ಹೊಂದಿರುವವರಿಗೆ ಪ್ರಕೃತಿಯಲ್ಲಿ ಕೆಲವು ಪರೀಕ್ಷೆಗಳು ಇಡಲ್ಪಡುತ್ತವೆ. ಪ್ರಕೃತಿಯಿಂದ ಇಡಲ್ಪಟ್ಟ ಅಂದರೆ ಪರೀಕ್ಷೆಗಳಿಲ್ಲಿ ಅವರು ಉತ್ತೀರ್ಣರಾದರೆ ಮಾತ್ರ ಅವರು ಆ ಶಕ್ತಿಗಳನ್ನು ಹೊಂದಲು ಅರ್ಹರಾಗುತ್ತಾರೆ. ಹಾಗೆ ಪ್ರತೀ ಹಂತದಲ್ಲೂ ಸಹ ಈ ಸಾಧಕರು ಪ್ರಕೃತಿ ಪರೀಕ್ಷೆಗಳನ್ನು ಎದುರಿಸಬೇಕಾಗಿ ಬರುತ್ತದೆ. ಅವು ಹೇಗಿರುತ್ತವೆಎಂದರೆ ಅವು ಪ್ರಕೃತಿಯಿಂದ ಇಡಲ್ಪಟ್ಟ ಪರೀಕ್ಷೆಗಳೆಂದು ಸಹ ಅವರಿಗೆ ತಿಳಿಯುವುದಿಲ್ಲ. ಅಂತಹ ಪರೀಕ್ಷೆಗಳಲ್ಲಿ ಉತ್ತೀರ್ಣರಾಗದೇಹೋದರೆ ಒಂದು ವೇಳೆ ಅವರು ಆ ಶಕ್ತಿಗಳನ್ನು ಹೊಂದಿದರೂ..... ಅವು ಪುನಃ ಕಳೆದುಹೋಗುತ್ತವೆ.

ಅಂತಹವರಿಗೆ ಮುಖ್ಯವಾಗಿ ಮೂರು ವಿಷಯಗಳಲ್ಲಿ ಪರೀಕ್ಷೆಗಳನ್ನು ಇಡಲ್ಪಡುತ್ತವೆ. ಅವು ಯಾವುವೆಂದರೆ 1) ಕೀರ್ತಿ, 2)ಕಾಂತ, 3)ಕನಕ. ಇವುಗಳನ್ನೇ 1) ಕ್ರೋಧ(ಅಹಂಕಾರ), 2) ಕಾಮ(ಕೋರಿಕೆ), 3)ಲೋಭ(ಆಸೆ) ಎಂದೂ ಸಹ ಕರೆಯುತ್ತಾರೆ.

ಮುಖ್ಯವಾಗಿ ಜ್ಞಾನಿಗೆ ಇರಬಾರದಂತಹ ಲಕ್ಷಣಗಳು ಕಾಮ, ಕ್ರೋಧ, ಲೋಭಗಳೇ. ಅದಕ್ಕೇ ಜ್ಞಾನವನ್ನು ಹೊಂದಬೇಕೆಂಬ ಆಸೆ ಇರುವವರಿಗೆ ಪ್ರಕೃತಿಯಿಂದ ಆ ವಿಷಯಗಳಲ್ಲಿಯೇ ಪರೀಕ್ಷೆಗಳನ್ನು ಇಡಲ್ಪಡುತ್ತವೆ. ಆ ಪರೀಕ್ಷೆಗಳು ಎಲ್ಲರಿಗೂ ಒಂದೇ ರೀತಿಯಾಗಿರುವುದಿಲ್ಲ. ಒಬ್ಬೊಬ್ಬರಿಗೆ ಒಂದೊಂದು ವಿಧದಲ್ಲಿರುತ್ತವೆ. ಅವು ಪರೀಕ್ಷೆಗಳೆಂಬ ವಿಷಯ ಸಹ ಅವರಿಗೆ ಅರ್ಥವಾಗುವುದಿಲ್ಲ. ಸಹಜವಾಗಿ ಅಂತಹ ಶಕ್ತಿಗಳನ್ನು ಹೊಂದಿದವರು, ನಾಲ್ಕು ಜನಗಳ ನಡುವೆ ಆ ಶಕ್ತಿಗಳನ್ನು ಪದರ್ಶಿಸುತ್ತಿರುವಾಗ ಇತರರನ್ನು, ಸಾಮಾನ್ಯರನ್ನು ಆಶ್ಚರ್ಯಚಕಿತರನ್ನಾಗಿ ಮಾಡುತ್ತವೆ, ಆಶ್ಚರ್ಯ ಪಡುತ್ತಾರೆ ಸಹ. ಆಗ ಎಲ್ಲರೂ ಇವರನ್ನು ಪ್ರಶಂಸಿಸುವುದು, ಹೊಗಳುವುದನ್ನು ಮಾಡುತ್ತಿರುತ್ತಾರೆ. ನೀವು ಸಾಮಾನ್ಯರಲ್ಲ. ದೈವಾಂಶ ಸಂಭೂತರು, ಯಾರೂ ಮಾಡಲಾರದ ಕೆಲಸಗಳನ್ನು ಮಾಡುತ್ತಿದ್ದೀರ, ಯಾರೂ ಹೇಳಲಾರದ ವಿಷಯಗಳನ್ನು ಹೇಳುತ್ತಿದ್ದೀರ, ನಿಮ್ಮಂತಹವರು ಇರುವುದಿಲ್ಲ ನೀವು ಅಷ್ಟು ಶ್ರೇಷ್ಟರು, ಇಷ್ಟು ಶ್ರೇಷ್ಟರು ಎಂದು ಪ್ರಶಂಸಿಸುತ್ತಿದ್ದರೆ ಇವರಲ್ಲಿ ಅಹಂಕಾರ ಹೆಚ್ಚುತ್ತದೆ. ಅಷ್ಟೇ ಅಲ್ಲ ನಾನಾಗಿರುವುದರಿಂದ ಸಾಧಿಸಿದ್ದೇನೆ, ನಾನಾಗಿರುವ್ಯದರಿಂದ ಪ್ರದರ್ಶಿಸಿದ್ದೇನೆ, ನಾನಾಗಿರುವ್ಯದರಿಂದ ಹೇಳುತ್ತದ್ದೇನೆ, ಎಲ್ಲರಿಗಿಂತ ನಾನೇ ಶ್ರೇಷ್ಟನೆಂಬ ಅಹಂಕಾರ ಹೆಚ್ಚುತ್ತದೆ. ಹಾಗೆ ಅವರು ಎಲ್ಲರಿಂದ ಹೊಗಳಿಕೆಗಳು, ಪ್ರಶಂಸೆಗಳನ್ನು ಹೊಂದಬೇಕೆಂದು ನೋಡುತ್ತಾರೆ. ಎಲ್ಲರಲ್ಲಿಯೂ ಒಳ್ಳೆ ಹೆಸರು ಬರಬೇಕೆಂದು ತಪನೆ ಪಡುತ್ತಾರೆ. ಎಲ್ಲರಲ್ಲಿಯೂ ಇನ್ನೂ ಇನ್ನೂ ಶ್ರೇಷ್ಟರಾಗಬೇಕೆಂದು ಇನ್ನೂ ಹೆಚ್ಚು ಜನಗಳ ನಡುವೆ ತಾನು ಒಳ್ಳೆಯ ಹೆಸರು ತಂದುಕೊಳ್ಳಬೇಕೆಂದು ತಪನೆ ಪಡುತ್ತಾರೆ. ಹಾಗೆ ತನ್ನ ಹೆಸರು, ಕೀರ್ತಿ ಹತ್ತುದಿಕ್ಕುಗಳಲ್ಲಿ ವ್ಯಾಪಿಸಬೇಕೆಂದು ಆಶಿಸುತ್ತಾರೆ, ಆಸೆ ಪಡುತ್ತಾರೆ, ಪ್ರಯತ್ನಿಸುತ್ತಾರೆ.

ಹಾಗೆ ತಾನು ಶ್ರೇಷ್ಠನೆಂದು ಭಾವಿಸುತ್ತಾ ಎಲ್ಲರನ್ನೂ ಕೇವಲವಾಗಿ ನೋಡುವುದು, ಎಲ್ಲರಿಂದ ಪಾದಾಭಿವಂದನೆಗಳನ್ನು ಮಾಡಿಸಿಕೊಳ್ಳುವುದು ಮಾಡುತ್ತಿರುತ್ತಾರೆ. ಇದು ಎಂತಹ ಪರಾಕಾಷ್ಠೆಗೆ ಸೇರಿಕೊಳ್ಳುತ್ತದೆ ಎಂದರೆ ಒಂದು ವೇಳೆ ಯಾರಾದರೂ ಹಾಗೆ ಮಾಡದೇ ಹೋದರೆ ಇವರ ಅಹಂಗೆ ಪೆಟ್ಟು ಬೀಳುತ್ತದೆ. ಅವಕಾಶ ಸಿಕ್ಕರೆ ಹಾಗೆ ಮಾಡಿದವರ ವಿಷಯದಲ್ಲಿ ಸೇಡು ಸಹ ತೀರಿಸಿಕೊಳ್ಳುತ್ತಾರೆ. ಅವರನ್ನು ಅವಮಾನಿಸುತ್ತಾರೆ ಸಹ ಕೊನೆಗೆ ಅವರು ತಾವೇ ಶ್ರೇಷ್ಠರೆಂಬ ಗರ್ವದಿಂದ, ಅಹಂಕಾರದಿಂದ ಮಾಡಬಾರದ ಕೆಲಸಗಳನ್ನು ಮಾಡುತ್ತಿರುತ್ತಾರೆ.

ಸೃಷ್ಟಿಗೆ ವಿರುದ್ಧವಾದ ಕೆಲಸಗಳನ್ನು ಮಾಡುತ್ತಿರುತ್ತಾರೆ. ಪ್ರಕೃತಿಗೆ ವಿರುದ್ಧವಾಗಿ ಪ್ರವರ್ತಿಸುತ್ತಾರೆ. ಇತರರನ್ನು, ಸಾಮಾನ್ಯರನ್ನು, ಅಮಾಯಕರನ್ನು ತಮ್ಮ ಸ್ವಂತ ಲಾಭಗಳಿಗೆ ಉಪಯೋಗಿಸಿಕೊಳ್ಳುತ್ತಾರೆ. ಹಾಗೆ ತನಗೆ ಕೊಡಲ್ಪಟ್ಟ ಶಕ್ತಿಗಳು, ಜ್ಞಾನವನ್ನು ತನ್ನ ಲಕ್ಷ್ಯಕ್ಕೆ ಅಲ್ಲದೇ ಪ್ರಕೃತಿಗೆ ವಿರುದ್ಧವಾದ ಕಾರ್ಯಕಲಾಪಗಳಿಗೆ ಉಪಯೋಗಿಸುವುದರಿಂದ ಸಹಜವಾಗಿ ಪ್ರಕೃತಿಯಿಂದ ಇಡಲ್ಪಟ್ಟ "ಕೀರ್ತಿ" ಎಂಬ ಪರೀಕ್ಷೆಯಲ್ಲಿ ಅವರು ವಿಫಲರಾಗುವುದರಿಂದ ಸಹಜವಾಗಿಯೇ ಪ್ರಕೃತಿಯಿಂದ ಕೊಡಲ್ಪಟ್ಟ ಶಕ್ತಿಗಳನ್ನು ಅವರು ಕಳೆದುಕೊಳ್ಳಬೇಕಾಗಿ ಬರುತ್ತದೆ. ಅಂದರೆ ಪ್ರಕೃತಿಯಿಂದ ಹಿಂದಕ್ಕೆ ತೆಗೆದುಕೊಳ್ಳಲ್ಪಡುತ್ತವೆ. ಹಾಗೆ ಅವರು ಸಂಪಾದಿಸಿಕೊಂಡಿರುವಂತಹವುಗಳನ್ನು ಕಳೆದುಕೊಳ್ಳುತ್ತಾರೆ. ಮತ್ತೆ ಮೊದಲಿನ ಸ್ಥಿತಿಗೆ ಬರುತ್ತಾರೆ ಅಂದರೆ ಮಾಮೂಲು ಮನುಷ್ಯರಾಗಿಬಿಡುತ್ತಾರೆ.

ಒಂದು ವೇಳೆ ಯಾರಾದರೂ ಈ ಕೀರ್ತಿ ಎಂಬ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ತನಗೆ ಎಷ್ಟು ತಿಳಿದರೂ, ಎಷ್ಟು ಶಕ್ತಿಗಳಿದ್ದರೂ ಗರ್ವ, ಅಹಂಕಾರ ಇಲ್ಲದೇ ಮಾಮೂಲಾಗಿಯೇ ಪ್ರವರ್ತಿಸುತ್ತಿದ್ದರೆ ಅವರಿಗೆ ತಿಳಿಯದಂತೆಯೇ ಅವರು ಮತ್ತೊಂದು ಪರೀಕ್ಷೆಯನ್ನು ಎದುರಿಸಬೇಕಾಗಿ ಬರುತ್ತದೆ.

ಸಹಜವಾಗಿ ಅವರು ಸ್ತ್ರೀಯಾದರೆ ಪುರುಷರು, ಪುರುಷರಾದರೆ ಸ್ತ್ರೀಯರು ಅವರು ಹೇಳುವ ಮಾರುಗಳಿಗೆ, ಅವರು ಮಾಡುವ ಕೆಲಸಗಳಿಗೆ, ಅವರು ಪ್ರದರ್ಶಿಸುವ ಶಕ್ತಿಗಳಿಗೆ ಅಕರ್ಷಿತರಾಗಿ ಅವರೊಂದಿಗೆ ಸಲುಗೆಯಿಂದ ವರ್ತಿಸುತ್ತಾರೆ. ಹತ್ತಿರವಾಗುವುದಕ್ಕೆ ಪ್ರಯತ್ನಿಸುತ್ತಾರೆ. ಅವರಲ್ಲಿ ಕೆಲವರು ಇವರ ದಾಸಿಯಾಗಿಬಿಡುತ್ತಾರೆ. ಅಂತಹ ಸ್ತ್ರೀಯರ ವ್ಯಾಮೋಹದಲ್ಲಿ ಇವರು ಬಿದ್ದಿದ್ದೇ ಆದರೆ... ಆ ಬಲಹೀನತೆ ಇವರಲ್ಲಿ ಪ್ರವೇಶಿಸಿದ್ದೇ ಆದರೆ... ಅವರ ಬಗ್ಗೆ ಇವರ ಪ್ರವರ್ತನೆ ಬದಲಾಗಿಬಿಡುತ್ತದೆ. ಅವರೊಂದಿಗೆ ಅಸಭ್ಯವಾಗಿ ವರ್ತಿಸುವುದು, ಮಾಡಬಾರದ ಕೆಲಸಗಳನ್ನು ಮಾಡುತ್ತಿರುತ್ತಾರೆ.

ನಿಧಾನವಾಗಿ ಅವರಿಗೆ ಇದು ಒಂದು ವ್ಯಸನ(ಚಟ)ವಾಗಿ ಬದಲಾಗಿಬಿಡುತ್ತದೆ. ತಾನು ಅನುಭವಿಸುವವರ ಮೇಲೆಯೇ ಅಲ್ಲದೇ ಎಲ್ಲರ ಮೇಲೆ ಇವರ ದೃಷ್ಟಿ ಬೀಳುತ್ತದೆ. ಹಾಗೆ ತನಗೆ ಇಷ್ಟವಾದವರನ್ನೆಲ್ಲಾ ಅನುಭವಿಸಬೇಕೆಂದು ಪ್ರಯತ್ನಿಸುತ್ತಾರೆ. ಅದಕ್ಕಾಗಿ ಅವರನ್ನು ಯಾವುದೋ ವಿಧದಲ್ಲಿ ವಶಪಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಅದಕ್ಕೋಸ್ಕರ ಅವರ

ಬುದ್ಧಿವಂತಿಕೆಯನ್ನು ವಿಧವಿಧವಾಗಿ ಪ್ರದರ್ಶಿಸುತ್ತಾರೆ. ಮಾಯೆ ಮಾತುಗಳನ್ನು ಹೇಳುತ್ತಾರೆ ನೀನು ಹಿಂದಿನ ಜನ್ಮದಲ್ಲಿ ನನ್ನ ಹೆಂಡತಿ ಎಂದು ಹೇಳುತ್ತಾರೆ, ನೀನು ನಾನು ಪ್ರೇಮಿಗಳೆಂದು... ಇಂತಹ ವಿಧವಿಧವಾದ ಮಾಯೆಮಾತುಗಳನ್ನು ಹೇಳುತ್ತಾರೆ ತಮ್ಮ ಶಕ್ತಿಗಳನ್ನು ಪ್ರದರ್ಶಿಸುತ್ತಾರೆ, ತೋರಿಸುತ್ತಾರೆ. ಯಾವುದೋ ವಿಧದಲ್ಲಿ ಕೋರಿಕೆಗಳನ್ನು ತೀರಿಸಿಕೊಳ್ಳಲು ಪ್ರಯತ್ನಿಸುತ್ತಾರೆ, ಸೃಷ್ಟಿವಿರುದ್ಧವಾಗಿ ಪ್ರವರ್ತಿಸುತ್ತಾರೆ. ಹಾಗೆ ತಮ್ಮ ಲಕ್ಷ್ಯ ಸಾಧನೆಗೆ ಕೊಡಲ್ಪಟ್ಟ ಶಕ್ತಿಗಳನ್ನು ಲಕ್ಷ್ಯಸಾಧನೆಗೆ ಉಪಯೋಗಿಸದೇ ತಮ್ಮ ಸ್ವಾರ್ಥ ಪ್ರಯೋಜನಗಳಿಗೆ ಉಪಯೋಗಿಸಿಕೊಳ್ಳಲು ಪ್ರಯತ್ನಿಸುವುದರಿಂದ, ಸೃಷ್ಟಿ ವಿರುದ್ಧವಾಗಿ ಉಪಯೋಗಿಸುವುದರಿಂದ, ಪ್ರಕೃತಿಯಿಂದ ಕೊಡಲ್ಪಟ್ಟ 'ಕಾಂತ' ಎಂಬ ಪರೀಕ್ಷೆ ಅಂದರೆ ಕಾಮ ಎಂಬ ಪರೀಕ್ಷೆಯಲ್ಲಿ ವಿಫಲನಾಗುವುದರಿಂದ ಸಹಜವಾಗಿಯೇ ಪ್ರಕೃತಿಯಿಂದ ಕೊಡಲ್ಪಟ್ಟ ಶಕ್ತಿಗಳು, ಪುನಃ ಪ್ರಕೃತಿಯಿಂದಲೇ ಉಪಸಂಹರಿಸಲ್ಪಡುತ್ತವೆ ಅಂದರೆ ಅವರು ಕಳೆದುಕೊಳ್ಳುತ್ತಾರೆ. ಮತ್ತೇ ಮಾಮೂಲು ಮನುಷ್ಯರಾಗಿಬಿಡುತ್ತಾರೆ.

ಅಂತಹ ಪರೀಕ್ಷೆಗಳನ್ನು ಸಹ ದಾಟಿದ ಅವರು ಈ ಪ್ರಕೃತಿಯಲ್ಲಿ ಇನ್ನೊಂದು ಪರೀಕ್ಷೆಯನ್ನು ಸಹ ಎದುರಿಸಬೇಕಾಗಿ ಬರುತ್ತದೆ. ಇವರಿಗೆ ಹೇರಳವಾಗಿ ಹಣ ಬರುತ್ತಿರುತ್ತದೆ. ಇವರ ಕೆಲಸಗಳು, ಇವರ ಶಕ್ತಿಗಳನ್ನು ನೋಡಿ ಇವರು ತುಂಬಾ ಶ್ರೇಷ್ಠರೆಂಬ ಉದ್ದೇಶದಿಂದ ಬಹಳ ಜನ ಇವರು ಕೇಳದಂತೆಯೇ ಇವರಿಗೆ ಹಣ, ಬಂಗಾರ, ಇನ್ನೂ ಹಲವಾರು ವಸ್ತುಗಳನ್ನು ಕೊಡುತ್ತಿರುತ್ತಾರೆ. ಮೊದಲಿಗೆ ಇವರು ಅಷ್ಟು ಆಸಕ್ತಿ ತೋರಿಸದಿದ್ದರೂ ಹಾಗೆ ಎಲ್ಲರೂ ಕೊಡುತ್ತಿದ್ದರೆ ನಿಧಾನವಾಗಿ ತೆಗೆದುಕೊಳ್ಳಲು ಪ್ರಾರಂಭಿಸುತ್ತಾರೆ. ಹಾಗೆ ನಿಧಾನವಾಗಿ ಹಣದ ಮೇಲೆ ವ್ಯಾಮೋಹ ಜಾಸ್ತಿಯಾಗುತ್ತದೆ. ಹಾಗೆ ನಿಧಾನವಾಗಿ ಆಸೆ ಸಹ ಹೆಚ್ಚುತ್ತಾ ಹೋಗುತ್ತದೆ. ಆ ಆಸೆಯಿಂದ ಹಣವನ್ನು ಹೆಚ್ಚಿಸಿಕೊಳ್ಳುವುದಕ್ಕೋಸ್ಕರ ಲೋಕಕಲ್ಯಾಣವೆಂದು ಎಲ್ಲರಿಂದಲೂ ಚಂದಾಗಳನ್ನು (ಹಣ) ವಸೂಲಿ ಮಾಡುವುದು, ಆಶ್ರಮವೆಂದು, ವಿಧವಿಧವಾದ ಕೆಲಸಗಳು, ಕಾರ್ಯಕ್ರಮಗಳು ಎಂದು ಚಂದಾಗಳನ್ನು ವಸೂಲಿ ಮಾಡುವುದು, ಅದನ್ನು ಕೊಡುತ್ತೇನೆ, ಇದನ್ನು ಮಾಡುತ್ತೇನೆ ಎಂದು ಹೇಳುತ್ತಾ ಚೆನ್ನಾಗಿ ವಸೂಲಿ ಮಾಡುತ್ತಿರುತ್ತಾರೆ. ಆಧ್ಯಾತ್ಮಿಕತೆಯ ಮುಸುಕಿನಲ್ಲಿ ಧನಾರ್ಜನೆ ಮಾಡುತ್ತಿರುತ್ತಾರೆ. ಆಧ್ಯಾತ್ಮಿಕ ಕೇಂದ್ರಗಳೆನ್ನುತ್ತಾ, ಅವು, ಇವು ಎಂದು ಹೇಳುತ್ತಾ ವಿಧವಿಧವಾಗಿ ಹಣ ಸಂಪಾದಿಸಲು ಪ್ರಯತ್ನಿಸುತ್ತಾರೆ ಕೊನೆಗೆ ಇವರ ಗುರಿ ಮರೆತುಹೋಗಿ ಹಣ ಸಂಪಾದನೆಯೇ ಗುರಿಯಾಗಿ ಜೀವಿಸುತ್ತಿರುತ್ತಾರೆ. ಹಣ ಸಂಪಾದಿಸಲು ಹಣವನ್ನು ಇನ್ನೂ ಅಧಿಕವಾಗಿ ಹೆಚ್ಚಿಸಿಕೊಳ್ಳಲು ವಿಧವಿಧವಾಗಿ ಪ್ರವರ್ತಿಸುತ್ತಾರೆ. ಈ ವಿಧವಾಗಿ ಎಲ್ಲವನ್ನು ಬೇಡವೆಂದುಕೊಂಡವರು ಕೊನೆಗೆ ಎಲ್ಲವುಗಳಿಗೋಸ್ಕರ ತಾಪತ್ರಯ ಪಡುತ್ತಾ ಪ್ರಕೃತಿಯಿಂದ ಇಡಲ್ಪಟ್ಟ 'ಕನಕ' ಅಂದರೆ 'ಹಣ' ಎಂಬ ಪರೀಕ್ಷೆಯಲ್ಲಿ ಸೋತುಹೋಗುವುದರಿಂದ ತಮ್ಮ ಶಕ್ತಿಗಳನ್ನು ಕಳೆದುಕೊಳ್ಳಬೇಕಾಗಿ ಬರುತ್ತದೆ. ಹಾಗೆ ಮತ್ತೆ ಮಾಮೂಲು ಮನುಷ್ಯರಾಗಿಬಿಡುತ್ತಾರೆ, ಶಕ್ತಿಹೀನರಾಗಿಬಿಡುತ್ತಾರೆ.

ಈ ಮೂರು ವಿಧದ ಪರೀಕ್ಷೆಗಳು ಸೃಷ್ಟಿಯಲ್ಲಿ ಇರುತ್ತವೆಂಬುದು ಪುರಾಣಗಳಲ್ಲಿನ ವಿಶ್ವಾಮಿತ್ರನ ಜೀವನದ ಮುಖಾಂತರ ನಾವು ತಿಳಿದುಕೊಳ್ಳಬಹುದು.

ಹಿಂದೆ ವಿಶ್ವಾಮಿತ್ರನು 1000 ವರ್ಷಗಳು ತಪಸ್ಸು ಮಾಡಿದನು ಅಂದರೆ 'ಧ್ಯಾನ' ಮಾಡಿದನು. ಅದರಿಂದ ಆತ ಅಪಾರವಾದ ಶಕ್ತಿ ಸಂಪಾದನೆ ಮಾಡಿಕೊಂಡನು. ಎಷ್ಟು ಶಕ್ತಿ ಸಂಪಾದಿಸಿಕೊಂಡನೆಂದರೆ ಸೃಷ್ಟಿಗೆ ಪ್ರತಿಸೃಷ್ಟಿ ಮಾಡುವಷ್ಟು ಶಕ್ತಿ ಸಂಪಾದಿಸಿದನು. ಹಾಗೆ ಅಪಾರವಾದ ಶಕ್ತಿಯನ್ನು ಸಂಪಾದಿಸಿದ ವಿಶ್ವಾಮಿತ್ರನನ್ನು ನೋಡಿ ಇಂದ್ರ ಭಯಪಟ್ಟನು, ಅಂತಹ ಶಕ್ತಿ ಸಂಪಾದಿಸಿದ ವಿಶ್ವಾಮಿತ್ರನು ಲೋಕಕ್ಕೆ ಒಳ್ಳೆಯದು ಮಾಡುತ್ತಾನಾ? ಕೆಟ್ಟದ್ದು ಮಾಡುತ್ತಾನಾ? ಎಂಬ ಸಂದೇಹದಿಂದ ವಿಶ್ವಾಮಿತ್ರನನ್ನು ಪರೀಕ್ಷಿಸಬೇಕೆಂದುಕೊಂಡನು. ಮೇನಕೆಯನ್ನು ಕಳುಹಿಸಿದನು ಮೇನಕೆಯ ಸೌಂದರ್ಯವನ್ನು ನೋಡಿ ವಿಶ್ವಾಮಿತ್ರನು ಮೋಹಿಸಿದನು. ನನ್ನನ್ನು ವಿವಾಹವಾಗೆಂದು ಕೋರಿಕೊಂಡನು. ಆಗ ಮೇನಕ ಒಂದು ಷರತ್ತು ಇಟ್ಟಳು. ಏನೆಂದು? ಯಾವಾಗಲಾದರೆ ನನ್ನ ಕೋರಿಕೆಯನ್ನು ಈಡೇರಿಸುವುದಿಲ್ಲವೋ... ಆಗ ನಿನ್ನನ್ನು ಬಿಟ್ಟು ಹೋಗುತ್ತೇನೆ ಎಂದಳು ಅದಕ್ಕೆ ವಿಶ್ವಾಮಿತ್ರನು ಅಂಗೀಕರಿಸಿದನು ಇಬ್ಬರೂ ಮದುವೆ ಮಾಡಿಕೊಂಡರು. ಸಂಸಾರ ಮಾಡುತ್ತಿದ್ದಾರೆ, ಆದರೆ ಪ್ರತೀದಿನ ಮೇನಕೆ ವಿಚಿತ್ರವಾದ ಕೋರಿಕೆಗಳನ್ನು ಕೋರುತ್ತಿದ್ದಳು. ಮಲ್ಲಿಗೆ ಹೂವು ಇಲ್ಲದ ಕಾಲದಲ್ಲಿ ಮಲ್ಲಿಗೆ ಹೂವುಗಳನ್ನು ಕೋರುತ್ತಿದ್ದಳು, ಮಾವಿನಹಣ್ಣು ಇಲ್ಲದ ಕಾಲದಲ್ಲಿ ಮಾವಿನಹಣ್ಣುಗಳನ್ನ ಕೇಳುತ್ತಿದ್ದಳು. ಆಕೆಯ ಮಾತನ್ನು ತಿರಸ್ಕರಿಸಲಾರದ ವಿಶ್ವಾಮಿತ್ರ ಆಕೆಯ ಕೋರಿಕೆ ತೀರಿಸಲು ತಾನು ಸಂಪಾದಿಸಿದ ಶಕ್ತಿಯನ್ನು ಸ್ವಲ್ಪ ಖರ್ಚುಮಾಡಿ ಮಲ್ಲಿಗೆ ಹೂವುಗಳನ್ನು ಸೃಷ್ಟಿಸುತ್ತಿದ್ದನು, ಮಾವಿನ ಹಣ್ಣುಗಳನ್ನು ಸೃಷ್ಟಿಸುತ್ತಿದ್ದನು, ಒಮ್ಮೊಮ್ಮೆ ನಿನ್ನೊಂದಿಗೆ ಆಕಾಶದಲ್ಲಿ ವಿಹರಿಸಬೇಕೆಂಬ ಆಸೆ ಇದೆ ಎನ್ನುತ್ತಿದ್ದಳು, ಹಾಗೆ ಪುನಃ ಸ್ವಲ್ಪ ಶಕ್ತಿ ಖರ್ಚುಮಾಡಿ ಕೋರಿಕೆಯನ್ನು ಮೇನಕೆ ಕೋರುತ್ತಿದ್ದಳು. ಆಕೆಯ ಕೋರಿಕೆಗಳನ್ನು ತೀರಿಸುತ್ತೇನೆಂದು ಮಾತು ಕೊಟ್ಟಿದ್ದ ವಿಶ್ವಾಮಿತ್ರನು ತನ್ನ ಶಕ್ತಿಯನ್ನು ಖರ್ಚುಮಾಡುತ್ತಾ ಆಕೆಯ ಕೋರಿಕೆಗಳನ್ನು ಈಡೇರಿಸುತ್ತಿದ್ದನು.

ಹೀಗಿರುವಾಗ ಮತ್ತೊಮ್ಮೆ ಆಕಾಶ ವಿಹಾರ ಮಾಡೋಣವೆಂದು ಮೇನಕ ಕೋರಿದಳು. ಆಗ ವಿಶ್ವಾಮಿತ್ರನು ಸರಿಯೆಂದು ಕೈಗಳನನ್ನು ಮೇಲಕ್ಕೆತ್ತಿ...... ಮೇಲೆ ಹೋಗೋಣವೆಂದುಕೊಂಡನು. ಆದರೆ 'ಧ್ಯಾನ'ದ ಮೂಲಕ ಸಂಪಾದಿಸಿದ ಶಕ್ತಿಯೆಲ್ಲಾ ಖರ್ಚಾಗಿಹೋಗಿದೆಯೆಂದು ತಿಳಿದುಕೊಂಡನು. ಆಗ ಮೇನಕೆಯೊಂದಿಗೆ ನನ್ನ ಶಕ್ತಿಯೆಲ್ಲಾ ಖರ್ಚಾಗಿದೆ (ಮುಗಿದುಹೋಗಿದೆ). ನಾನು ಮೇಲೇಳಲಾರದೇ ಹೋಗುತ್ತಿದ್ದೇನೆ ಎಂದನು. ಆಗ ಮೇನಕೆ ತಾನು ಇಟ್ಟ ಷರತ್ತನ್ನು ನೆನಪಿಸಿ ವಿಶ್ವಾಮಿತ್ರನನ್ನು ಬಿಟ್ಟು ತಾನು ಸ್ವರ್ಗಕ್ಕೆ ಹೋದಳು. ಆಗ ವಿಶ್ವಾಮಿತ್ರನು ತುಂಬಾ ನೋವನುಭವಿಸಿದನು (ವ್ಯಥೆಪಟ್ಟನು) ತಾನು 1000 ವರ್ಷಗಳು ಎಷ್ಟೋ ಕಷ್ಟ ಪಟ್ಟು ಮಾಡಿದ ತಪಃಶಕ್ತಿ ಎಲ್ಲಾ ಖರ್ಚಾಗಿಹೋಯಿತೇ! ಮೇನಕೆ ಕೋರಿಕೆಗಳನ್ನು



ತೀರಿಸುವುದಕ್ಕೋಸ್ಕರ ನಾನು ಎಷ್ಟೋ ಶಕ್ತಿಯನ್ನು ಕಳೆದುಕೊಂಡೆ ಎಂದು ವ್ಯಥೆಪಟ್ಟನು. ಏಕೆಂದರೆ 1000 ವರ್ಷಗಳೆಂದರೆ ಸುಮ್ಮನೇನಾ? ಎಷ್ಟು ಕಷ್ಟ ಪಟ್ಟಿದ್ದಾನೆ? ಎಷ್ಟು ಕಷ್ಟ ಪಟ್ಟು ತಪ್ಪಸ್ಸು(ಧ್ಯಾನ) ಮಾಡಿದ್ದಾನೆ? ತಾನು ಪಟ್ಟ ಕಷ್ಟ, ಸಂಪಾದಿಸಿದ ಶಕ್ತಿ ಎರಡೂ ವ್ಯರ್ಥವೇ ಅಲ್ಲವೇ? ಹೋಗಲಿ ಮೇನಕೆಯಾದರೂ ಇದ್ದಾಳೆಯೇ? ಅಂದರೆ ಆಕೆ ಸಹ ಹೊರಟುಹೋದಳು. ಈಗ ಏನಿದೆ ಅಂದರೆ ಏನೂ ಇಲ್ಲ, ಹಾಗೆ ಎಷ್ಟು ವ್ಯಥೆ ಪಟ್ಟರೂ ಪ್ರಯೋಜನ ಇಲ್ಲವಲ್ಲ? ಕಳೆದುಕೊಂಡ ಶಕ್ತಿ ಮರಳಿ ಬಾರದು ತಾನೇ? ಮಾಡುವುದೇನೂ ಇಲ್ಲದೇ ಪುನಃ ತಪಸ್ಸು ಮಾಡಲು ಪ್ರಾರಂಭಿಸಿದನು ಮತ್ತೆ 1000 ವರ್ಷಗಳು 'ತಪಸ್ಸು' ಅಂದರೆ 'ಧ್ಯಾನ' ಮಾಡಿದನು ಮತ್ತೆ ಅಪಾರವಾದ ಶಕ್ತಿಯನ್ನು ಸಂಪಾದಿಸಿದನು.

ಈ ಸಾರಿ ಇಂದ್ರನು ರಂಭೆಯನ್ನು ಕಳುಹಿಸಿದ. ರಂಭೆಯನ್ನು ನೋಡಿದ ತಕ್ಷಣವೇ ವಿಶ್ವಾಮಿತ್ರನಿಗೆ ವಿಪರೀತವಾದ ಸಿಟ್ಟು ಬಂತು. ಇಂದ್ರ ನನ್ನನ್ನು ಮೂರ್ಖನೆಂದುಕೊಂಡಿದ್ದಾನೆಯೇ? ಅವನಿಗೆ ಬುದ್ಧಿ ಕಲಿಸುತ್ತೇನೆಂದು ಕೋಪಿಸಿಕೊಂಡು ರಂಭೆಯನ್ನು ಶಿಲೆಯಾಗಿ ಹೋಗೆಂದನು ಶಪಿಸಿದನು. ಆದರೆ ಹಾಗೆ ಶಪಿಸಿದ್ದರಿಂದ ಅಂದರೆ ಕೋಪದಿಂದ ತನ್ನ ಶಕ್ತಿಯನ್ನೆಲ್ಲಾ ಕಳೆದುಕೊಂಡನು. ಮತ್ತೆ ಸಾಧಾರಣ ಮನುಷ್ಯನಾಗಿಹೋದನು. ಪುನಃ ಎಷ್ಟೋ ವ್ಯಥೆ ಪಟ್ಟನು.

ಮಾಡುವುದೇನೂ ಇಲ್ಲದೇ ಮತ್ತೊಮ್ಮೆ ಛಲದಿಂದ ತಪಸ್ಸು ಮಾಡಲಾರಂಭಿಸಿದನು. ಈ ಸಾರಿ 1000 ವರ್ಷಗಳು 'ತಪಸ್ಸ'ನ್ನು ಅಂದರೆ 'ಧ್ಯಾನ' ಮಾಡಿ ಮತ್ತೆ ಅಂತಹ ಶಕ್ತಿಯನ್ನು ಸಂಪಾದಿಸಿದನು. ಈ ಸಾರಿ ಇಂದ್ರ ಲೋಭದ ಪರೀಕ್ಷೆಯನ್ನಿಟ್ಟನು. ಅಂದರೆ ಹಣದ ವಿಷಯದಲ್ಲಿ ಹೇಗೆ ಪ್ರವರ್ತಿಸಿತ್ತಾನೋ ನೋಡಬೇಕೆಂದುಕೊಂಡನು. ಕಾರಣ

ಇದಕ್ಕಿಂತ ಮುಂಚೆ ಕಾಮದ, ಕ್ರೋಧದ ಪರೀಕ್ಷೆಯನ್ನು ಇಟ್ಟಿದ್ದ. ಒಂದು ದಿನ ವಿಶ್ವಾಮಿತ್ರನು ಊಟ ಮಾಡೋಣವೆಂದು ಊಟದ ಮುಂದೆ ಕುಳಿತುಕೊಂಡನು ಅದೇ ಸಮಯಕ್ಕೆ ಇಂದ್ರನು ತನ್ನನ್ನು ಈ ವಿಧವಾಗಿ ಪರೀಕ್ಷಿಸಲು ಬಂದಿದ್ದಾನೆಂದು ತಿಳಿದುಕೊಂಡನು. ತಕ್ಷಣವೇ ಇಂದ್ರನನ್ನು ಕರೆದು ತಾನು ತಿನ್ನಬೇಕಾಗಿದ್ದ ಆಹಾರವನ್ನೆಲ್ಲಾ ಕೊಟ್ಟುಬಿಟ್ಟನು. ಆಗ ಇಂದ್ರನು ತನ್ನ ನಿಜರೂಪವನ್ನು ತೋರಿಸಿ ವಿಶ್ವಾಮಿತ್ರ ಲೋಭದ ವಿಷಯದಲ್ಲಿ ನಿನ್ನನ್ನು ಪರೀಕ್ಷಿಸಬೇಕೆಂದುಕೊಂಡೆ. ನೀನು ಗೆದ್ದೆ! ನೀನು ಈಗ ನಿಜವಾದ ಬ್ರಹ್ಮಜ್ಞಾನಿಯಾಗಿದ್ದೀಯ, ಬ್ರಹ್ಮರ್ಷಿಯಾಗಿದ್ದೀಯ ಎಂದು ಹೊಗಳಿ ಅದೃಶ್ಯನಾದನು.

ಮೇಲಿನ ಪುರಾಣ ಕಥೆಯನ್ನಾಧರಿಸಿ ಯಾರಿಗಾದರೂ ಸೃಷ್ಟಿಯಲ್ಲಿ ಈ ವಿಧವಾದ ಪರೀಕ್ಷೆಗಳು ಇರುತ್ತವೆಯೆಂದು ನಾವು ತಿಳಿದುಕೊಳ್ಳಬಹುದು. ಆದ್ದರಿಂದ ಶಕ್ತಿಗಳನ್ನು ಸಂಪಾದಿಸಿದವರು ಅಹಂಕಾರ ಪಡಬಾರದು, ಸ್ತ್ರೀ ಆಕರ್ಷಣೆಯಲ್ಲಿ ಬೀಳಬಾರದು. ಹಣಕ್ಕೆ ಆಕರ್ಷಿತರಾಗಬಾರದು, ಕಾಮ, ಕ್ರೋಧ ಲೋಭಗಳನ್ನು ಜಯಿಸಬೇಕು ಅವರ ಹಿಡಿತದಲ್ಲಿಟ್ಟುಕೊಳ್ಳಬೇಕು. ಅಂತಹವರೇ 'ಜ್ಞಾನಿಗಳು', ಅವರಿಗೇ ಈ ಸೃಷ್ಟಿಯಲ್ಲಿನ ಜ್ಞಾನವನ್ನು ಹೊಂದುವ ಅರ್ಹತೆ ಇರುತ್ತದೆ ಎಂದು ತಿಳಿದುಕೊಳ್ಳಬೇಕು. ಪ್ರಸ್ತುತ ಬಹಳಷ್ಟು ಧ್ಯಾನಿಗಳು, ಧ್ಯಾನದ ಲಕ್ಷ್ಯವೇನೆಂದು ತಿಳಿದುಕೊಳ್ಳಲಾರದೇ, ಧ್ಯಾನ ಏಕೆ ಮಾಡುತ್ತಿದ್ದಾರೋ ತಿಳಿಯದೆ ಇಂತಹ ಶಕ್ತಿಗಳಿಗೋಸ್ಕರ ನೋಡುತ್ತಿದ್ದಾರೆ. ಅಂತಹ ಅನುಭವಗಳಿಗೋಸ್ಕರ ಆಸೆಪಡುತ್ತಿದ್ದಾರೆ. ಅವುಗಳಿಂದ ತಮ್ಮ ಬಯಕೆಗಳನ್ನು ಈಡೇರಿಸಿಕೊಳ್ಳಬಹುದೆಂದು ಭಾವಿಸಿತ್ತಿದ್ದಾರೆ.

ಎಲ್ಲರಲ್ಲಿ ತಮ್ಮ ಶ್ರೇಷ್ಟತೆಯನ್ನು ಪ್ರದರ್ಶಿಸಲು ಪ್ರಯತ್ನಿಸುತ್ತಿದ್ದಾರೆ. ಅನುಭವಗಳಿಗೋಸ್ಕರವೇ ಧ್ಯಾನವೆಂಬಂತೆ ಭಾವಿಸುತ್ತಿದ್ದಾರೆ. ಸದಾ... ಧ್ಯಾನ ಸಾಧನೆಗಿಂತಾ ಅನುಭವಗಳು ಬಂದಿವೆಯೇ? ಇಲ್ಲವೇ? ಎಂಬುದಕ್ಕೇ ಪ್ರಾಮುಖ್ಯತೆ ಕೊಡುತ್ತಿದ್ದಾರೆ. ಅಂತಹವುಗಳಲ್ಲಿ ಕೆಲವು ಅನುಭವಗಳನ್ನು ಪಡೆದರೂ ಅದನ್ನು ದೊಡ್ಡವಿಷಯವೆಂಬಂತೆ ಹೇಳಿಕೊಳ್ಳಲು, ಎಲ್ಲರಲ್ಲಿ ತಮ್ಮ ಹಿರಿಮೆಯನ್ನು ಪ್ರದರ್ಶಿಸಲು ಪ್ರಯತ್ನಿಸುತ್ತಿದ್ದಾರೆ. ಅವುಗಳನ್ನು ಕೇಳಿದವರಲ್ಲಿ ಬಹಳಷ್ಟು ಜನ ಧ್ಯಾನ ಆರಂಭಿಸಿದ ತಕ್ಷಣವೇ ಅನುಭವಗಳಿಗೋಸ್ಕರ ನೋಡುತ್ತಿರುತ್ತಾರೆ. ಅನುಭವಗಳು ಬರದೇ ಹೋದರೆ ನಿರಾಸೆ ಹೊಂದುತ್ತಿದ್ದಾರೆ ಅಂತಹ ಅನುಭವಗಳು ಹೇಳುವವರನ್ನು ನೋಡಿ ತಾವು ಅಂತಹ ಅನುಭವಗಳು ಹೊಂದಲಾರದೇ ಹೋದೆವೆಂದು ಸಂಕಟ ಪಡುತ್ತಿರುತ್ತಾರೆ.

ಅಂತಹವರು ಅಧಿಕವಾಗಿರುವುದರಿಂದಲೇ ಅವರನ್ನು ಆಕರ್ಷಿಸಿ ತಮ್ಮ ಸ್ವಾರ್ಥ ಪ್ರಯೋಜನಗಳಿಗೆ ಉಪಯೋಗಿಸಿಕೊಳ್ಳಲು ಬಹಳಷ್ಟು ಜನ ಅನೇಕ ವಿಧಗಳಲ್ಲಿ ಪ್ರಯತ್ನಿಸುತ್ತಿದ್ದಾರೆ. ವಿಧವಿಧವಾಗಿ ಮೋಸಮಾಡುತ್ತಿದ್ದಾರೆ.

ಆದ್ದರಿಂದ ತಿಳಿದುಕೊಳ್ಳಿ **ಮಾನವನಿಗೆ ಅತೀಂದ್ರಿಯ ಶಕ್ತಿಗಳು ಅವಶ್ಯಕವೇ? ಯಾವುದಕ್ಕೋಸ್ಕರ ಅಂದರೆ? ಜೀವನದಲ್ಲಿ ದುಃಖದಿಂದ ಶಾಶ್ವತವಾಗಿ ಹೊರಬರಲು ಬೇಕಾದ 'ಆತ್ಮಜ್ಞಾನ'ವನ್ನು ಸಂಪಾದಿಸಿಕೊಳ್ಳಲು, 'ಆತ್ಮಸಾಕ್ಷಾತ್ಕಾರ'ವನ್ನು ಹೊಂದಲು.**

ಕಾರಣ ಆ ಶಕ್ತಿಗಳೇ ಇಲ್ಲದೇಹೋದರೆ ಯಾರೇ ಆಗಲೀ ಸೃಷ್ಟಿಯಲ್ಲಿನ ಅತೀಂದ್ರಿಯ ಜ್ಞಾನವನ್ನು ಸಂಪಾದಿಸಿಕೊಳ್ಳಲು ಆಗುವುದಿಲ್ಲ ಲಕ್ಷ್ಯವನ್ನು ಸಾಧಿಸಲಾರರು. ಆದ್ದರಿಂದ **"ಅತೀಂದ್ರಿಯ ಶಕ್ತಿಗಳು ಮಾನವನಿಗೆ ಖಡ್ಡಾಯವಾಗಿ ಅವಶ್ಯಕವೇ. ಎಷ್ಟರವರೆಗೆ ಅವಶ್ಯಕವೆಂದರೆ ಆತ್ಮಜ್ಞಾನವನ್ನು ಸಂಪಾದಿಸಿಕೊಳ್ಳಲು, ಆತ್ಮ ಪಥವನ್ನು ಸಾಧಿಸಿಕೊಳ್ಳಲು ಮಾತ್ರವೇ ಹೊರತು, ಇತರೆ ಯಾವುದೇ ಪ್ರಯೋಜನಗಳಿಗೋಸ್ಕರ ಅಲ್ಲವೆಂದು ತಿಳಿದುಕೊಳ್ಳಬೇಕು",**

ಯಾವುದು ಏನೇ ಆದರೂ ಈ ಅನುಭವಗಳು, ಶಕ್ತಿಗಳು, ಸಿದ್ಧಿಗಳು ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳಲು ಸಮಸ್ಯೆಗಳನ್ನು ಪರಿಹರಿಸಕೊಳ್ಳಲು, ಸ್ವಾರ್ಥ ಪ್ರಯೋಜನೆಗಳಿಗೆ ಉಪಯೋಗಿಸಿಕೊಳ್ಳಲು ಮಾತ್ರ ಅಲ್ಲ. ಮಾನವ ಜ್ಞಾನವನ್ನು ಸಂಪಾದಿಸಿಕೊಳ್ಳಲು, ಪರಿಪೂರ್ಣ ಜ್ಞಾನಿಯಾಗಲು ಅನುಭವಪೂರ್ವಕವಾಗಿ ಆತ್ಮಜ್ಞಾನವನ್ನು ತಿಳಿದುಕೊಳ್ಳುವುದಕ್ಕೋಸ್ಕರವೇ ಎಂದು ತಿಳಿದುಕೊಳ್ಳಬೇಕು. ನಿಜವಾಗಿಯೂ ಮಾನವ ಜೀವನದ ಲಕ್ಷ್ಯ ಇದೇ. ಆದ್ದರಿಂದ ಧ್ಯಾನಸಾಧನೆ ಮಾಡುವವರು, ಅನುಭವಗಳ ಮೇಲೆ, ಶಕ್ತಿಗಳಮೇಲೆ ದೃಷ್ಟಿ ಇರಿಸಬೇಡಿ, ಅವುಗಳ ಬಗ್ಗೆ ಆಲೋಚಿಸಬೇಡಿ. ಎಷ್ಟು ಜ್ಞಾನ ಸಂಪಾದಿಸಿದ್ದೇವೆ? ಎಷ್ಟು ಜ್ಞಾನವಂತರಾಗಿದ್ದೇವೆ? ನಮ್ಮ ಪ್ರವರ್ತನೆ ಎಷ್ಟು ಬದಲಾಗಿದೆ? ಜ್ಞಾನದ ಪರವಾಗಿ ಎಷ್ಟು ಅಭಿವೃದ್ಧಿ ಹೊಂದಿದ್ದೇವೆ? ನಮ್ಮ ಕೆಲಸಗಳು, ಪ್ರವರ್ತನೆಗಳು ಇತರರಿಗೆ ಆದರ್ಶವಾಗಿವೆಯೇ? ಇಲ್ಲವೇ? ಎನ್ನುವ ವಿಷಯಗಳ ಮೇಲೆ ದೃಷ್ಟಿ ಇಡಿ. ಆದ್ದರಿಂದ ಎಷ್ಟು ವಿಧವಾದ ಅನುಭವಗಳು ಬಂದಿವೆ? ಎಂಬುದು ಪ್ರಧಾನವಲ್ಲ. ಇದಕ್ಕಿಂತ ಮುಂಚೆ, ಈಗಿನ ಪ್ರವರ್ತನೆಯಲ್ಲಿ ಎಷ್ಟು ಬದಲಾವಣೆ ಆಗಿದೆ? ಎಂಬುದೇ ಪ್ರಧಾನವೆಂದು ತಿಳಿದುಕೊಳ್ಳಬೇಕು. ಧ್ಯಾನಸಾಧನೆಯ ಮೂಲಕ ಅನುಭವಗಳನ್ನು ಸಂಪಾದಿಸಿದರೂ ಪ್ರವರ್ತನೆ ಬದಲಾಗದೇ ಹೋದರೆ ಮಾಡಿದ ಸಾಧನೆಯಲ್ಲಾ ವ್ಯರ್ಥವೆಂದೂ ಸಹ ತಿಳಿದುಕೊಳ್ಳಬೇಕು. ಮುಖ್ಯವಾಗಿ "ಬೇಕಾದದ್ದು ಜ್ಞಾನ – ಬರಬೇಕಾದದ್ದು ಬದಲಾವಣೆ" ಎಂದು ತಿಳಿದುಕೊಳ್ಳಿ. ಆದ್ದರಿಂದ ನೀವು ನಿಮ್ಮ ಒಂದು ಹಿಂದಿನ ಜನ್ಮವನ್ನು ನೋಡಿಕೊಂಡರೂ! ಯಾವುದೋ ಒಂದು ಸಮಸ್ಯೆಗೆ ಪರಿಹಾರ ಕಂಡುಕೊಂಡರೂ, ಒಂದು ರೋಗವನ್ನು ಗುಣಪಡಿಸಿಕೊಂಡರೂ ದೊಡ್ಡ ಪ್ರಯೋಜನ ಏನೂ ಇಲ್ಲವೆಂದು ತಿಳಿದುಕೊಳ್ಳಿ. ಕಾರಣ ಒಂದು ಸಮಸ್ಯೆ ಪರಿಹಾರವಾದ ಮಾತ್ರಕ್ಕೆ ಲಾಭ ಇಲ್ಲ ಮಾನವನಿಗೆ ಎಷ್ಟೋ ಸಮಸ್ಯೆಗಳಿರುತ್ತವೆ. ಒಂದು ವೇಳೆ ಒಂದು ಸಮಸ್ಯೆ ಪರಿಹಾರವಾದರೆ ಇನ್ನೊಂದು ಸಮಸ್ಯೆ ಬರುತ್ತದೆ. ಒಂದು ರೋಗ ಹೋದರೂ ಇನ್ನೊಂದು ರೋಗ ಬರುತ್ತದೆ. ಹಾಗೆ ಜೀವನದಲ್ಲಿ ಎಷ್ಟೆಷ್ಟೋ ಸಮಸ್ಯೆಗಳು, ಕಷ್ಟಗಳು ಇರುತ್ತವೆ. ಅಷ್ಟೇ ಅಲ್ಲ ಹಿಂದಿನ ಜನ್ಮವನ್ನು ನೋಡಿಕೊಂಡಿದ್ದೇವೆ ಸರಿ! ಆದರೆ ನಮ್ಮ ಪ್ರವರ್ತನೆಯಲ್ಲಿ ಬದಲಾವಣೆ ಬರದೇ ಹೋದರೆ ಏನು ಪ್ರಯೋಜನ? 'ಜ್ಞಾನ' ಹೊಂದಿದ್ದರೆ ಪ್ರಯೋಜನವೇನು? ಆಲೋಚಿಸಿರಿ ಹಾಗೆ ಹಿಂದಿನ ಜನ್ಮವನ್ನು ನೋಡಿಕೊಳ್ಳುವುದೆಂಬುದು ಖುಷಿಗಾಗಿಯೇ ಹೊರತು ಅದಕ್ಕಿಂತ ಪ್ರಯೋಜನವೇನೂ

ಇಲ್ಲ. ಮಾನವನಿಗೆ ಹಲವಾರು ಕುತೂಹಲಗಳಿರುತ್ತವೆ. ಅದರಲ್ಲಿ ಇದೊಂದು ಕುತೂಹಲ ಅಷ್ಟೇ.

ಏಕೆಂದರೆ ಈ ಸೃಷ್ಟಿಯಲ್ಲಿ ಏನೇ ಸಂಭವಿಸಿದರೂ! ಏನೇ ಆದರೂ ಎಲ್ಲಾ ಒಳ್ಳೆಯದಕ್ಕೇ! ಕಾರಣ ಹಿಂದಿನ ಜನ್ಮಗಳು ಮರೆವು ಅಷ್ಟೇ ಅಲ್ಲ, ಹಿಂದಿನ ಜನ್ಮದ ಮರೆವು ಎಂಬುದು ಮಾನವನಿಗೆ 'ಪ್ರಕೃತಿ'ಯಿಂದ ಕೊಡಲ್ಪಟ್ಟ ಒಂದು ವರ. ಕಾರಣ ಹಿಂದಿನದನ್ನು ಮರೆಯದೇ ಹೋದರೆ ಮಾನವ ಶಾಂತಿಯಿಂದ ಜೀವಿಸಲಾರ, ವರ್ತಮಾನದಲ್ಲಿ ಜೀವಿಸಲಾರ. ಆದ್ದರಿಂದ ಪ್ರಕೃತಿ ಏನು ಮಾಡಿದರೂ ಮಾನವರ ಕ್ಷೇಮಕ್ಕೋಸ್ಕರವೇ, ಆಲೋಚಿಸಿದರೆ ಪ್ರಕೃತಿ ಮಾಡುವಂತಹವೆಲ್ಲಾ ಮಾನವನಿಗೆ ಲಾಭವನ್ನು ಉಂಟುಮಾಡುವಂತಹವೇ.

ಏಕೆಂದರೆ ಪ್ರಸ್ತುತ ಪ್ರಪಂಚದಲ್ಲಿ ಗಮನಿಸಿದರೆ ಯಾರಿಗೂ ಶಾಂತಿ ಇಲ್ಲ ಇದಕ್ಕೆ ಮುಖ್ಯ ಕಾರಣ ಹಿಂದೆ ಅವರ ಜೀವನದಲ್ಲಿ ನಡೆದ ದುಃಖಕರ ಸಂಘಟನೆಗಳನ್ನು ಮರೆಯಲಿಕ್ಕೆ ಆಗದಿರುವುದು. ಏಕೆಂದರೆ ಪ್ರತಿಯೊಬ್ಬರ ಜೀವನದಲ್ಲೂ ಯಾವುದೋ ಒಂದು ಸಂಘಟನೆ ನಡೆಯುತ್ತಲೇ ಇರುತ್ತದೆ. ವ್ಯಾಪಾರದಲ್ಲಿ ನಷ್ಟ ಬರುವುದು, ಕುಟುಂಬದಲ್ಲಿ ಜಗಳಗಳು ನಡೆಯುವುದು, ಯಾವುದಾದರೂ ಅಪಘಾತ ಸಂಭವಿಸುವುದು, ರಾಜಕೀಯಗಳಲ್ಲಿ ಸೋಲುವುದು, ಪರೀಕ್ಷೆಗಳಲ್ಲಿ ಫೇಲ್ ಆಗುವುದು, ಇಲ್ಲದೇ ಹೋದರೆ ಗಂಡನಾಗಲಿ, ಹೆಂಡತಿಯಾಗಲೀ, ಮಕ್ಕಳಾಗಲೀ ಸತ್ತು ಹೋಗುವುದು, ದೊಡ್ಡ ಖಾಯಿಲೆ ಬರುವುದು, ಇಂತಹ ಎಷ್ಟೋ ನಡೆಯುತ್ತವೆ. ಅವು ಸಂಭವಿಸಿದಾಗ ದುಃಖಿಸುವುದು, ಇದರಿಂದ ಶಾಂತಿ ಕಳೆದುಕೊಳ್ಳುವುದೆಂಬುದು ಸಹಜ, ಆದರೆ ಆ ಸಂಘಟನೆ ನಡೆದು ಮೂರು ತಿಂಗಳಾದರೂ, ಆರು ತಿಂಗಳಾದರೂ, ಮೂರು ವರ್ಷಗಳಾದರೂ ನೆನಪಿಗೆ ಬಂದರೆ ಪುನಃ ಆ ಘಟನೆಗಳು ನಡೆಯದೇ ಹೋದರೂ ಅವು ಸಂಭವಿಸಿದಂತೆ ದುಃಖಿಸುತ್ತಿರುತ್ತಾರೆ. ಶಾಂತಿಯನ್ನು ಕಳೆದುಕೊಳ್ಳುತ್ತಾರೆ. ಹಾಗೆ ಎಷ್ಟು ಸಾರಿ ನೆನಪಿಗೆ ಬಂದರೆ ಅಷ್ಟು ಸಾರಿ ಅಶಾಂತಿಗೆ ಗುರಿಯಾಗುತ್ತಾರೆ. ಇದಕ್ಕೆಲ್ಲಾ ಕಾರಣ ನಡೆದು ಹೋದ ಸಂಘಟನೆಗಳನ್ನು ಮರೆತು ಹೋಗದಿರುವುದು. ಅಂದರೆ ಹಿಂದಿನದನ್ನು ಮರೆಯದೇ ಇರುವುದು. ಅವರೇನಾದರೂ ನಡೆದ ಅಹಿತಕರ ಘಟನೆಗಳನ್ನು ಮರೆತು ಹೋದರೆ, ವರ್ತಮಾನದಲ್ಲಿ ಜೀವಿಸಿದ್ದರೆ ಅವರು ಶಾಂತಿಯಾಗಿ ಜೀವಿಸಿರುತ್ತಿದ್ದರು. ಅದಕ್ಕೇ ಅಂತಹ ಸಂಘಟನೆಗಳು ನಡೆದವರು ನಡೆದಿರುವ ವಿಷಯಗಳನ್ನು ಮರೆಯಲು ಎಷ್ಟೋ ಪ್ರಯತ್ನಗಳನ್ನು ಮಾಡುತ್ತಾರೆ. ಗುರುಗಳನ್ನು ಆಶ್ರಯಿಸುತ್ತಾರೆ. ಜಾಗಗಳನ್ನು ಬದಲಾಯಿಸುತ್ತಾರೆ, ಎಷ್ಟೋ ಅವಸ್ಥೆಗಳನ್ನು ಪಡುತ್ತಿರುತ್ತಾರೆ ಇದೆಲ್ಲಾ ಹಿಂದಿನದನ್ನು ಮರೆತುಹೋಗುವುದಕ್ಕೇ ಅಲ್ಲವೇ? ಅಂದರೆ ಹಿಂದಿನ ಮರೆವು ಎಂಬುದು ಅತ್ಯವಶ್ಯಕವೇ ತಾನೇ? ಯಾವುದು ಏನಾದರೂ ಸೃಷ್ಟಿಯಲ್ಲಿರುವ ವ್ಯವಸ್ಥೆ ಏನೆಂದರೆ ಹಿಂದಿನದನ್ನು ಮರೆತುಹೋಗುವುದು, ಅದೇ ಇಲ್ಲದೇ ಹೋದರೆ ಯಾರೂ ಬದುಕಿರಲಾರರು. ಉದಾಹರಣೆಗೆ ಗಂಡ ಹೆಂಡತಿಯರನ್ನೇ ತೆಗೆದುಕೊಳ್ಳೋಣ, ಬಹಳ ಜನ ಸದಾ ಜಗಳವಾಡುತ್ತಿರುತ್ತಾರೆ, ಆದರೆ

ಆ ಜಗಳವನ್ನು ಮರೆತುಹೋಗುವವರೆಗೆ ಇಬ್ಬರು ಹತ್ತಿರವಾಗಲಾರರು, ಪುನಃ ಒಂದಾಗಲಾರರು ಅವರಿಬ್ಬರನ್ನು ಒಂದುಗೂಡಿಸುವುದು ಮರೆವೇ. ಅದೇರೀತಿ ಎರಡು ವರ್ಗಗಳ ಮಧ್ಯೆ ಘರ್ಷಣೆ ಉಂಟಾದರೆ ಮಧ್ಯೆವರ್ತಿಗಳು ರಾಜೀ ಮಾಡಲಿಕ್ಕೆ ಕೆಲವು ದಿನಗಳವರೆಗೆ ವಾಯಿದೆ ಹಾಕುತ್ತಾರೆ. ಕಾರಣ ಅವರು ಕೋಪವನ್ನು ಮರೆತು ಅವರ ಉದ್ರೇಕಗಳು ಕಡಿಮೆಯಾಗುತ್ತವೆ ಎಂದು. ದಿನಗಳುರುಳಿದಂತೆ ನಡೆದದ್ದನ್ನು ಮರೆತು ಸಂತೋಷವಾಗಿರಲು.

ಹೀಗೆ ನಡೆದರೂ ನಡೆದದ್ದನ್ನು ಮರೆತುಹೋಗಲು ಹೇಳುತ್ತಾರೆ. ಕಾರಣ ಎಲ್ಲವೂ ಮಾಮೂಲುಸ್ಥಿತಿಗೆ ಬರುತ್ತವೆಯೆಂದು, ಆದ್ದರಿಂದ ಆಲೋಚಿಸಿ ಈ ಜನ್ಮದಲ್ಲಿ ನಡೆದಿರುವಂತಹವುಗಳನ್ನೇ ಮರೆಯಲು ನಾನಾ ಅವಸ್ಥೆಗಳನ್ನು ಪಡುತ್ತಿದ್ದಾರೆ ಇದು ಸಾಲದೆಂಬಂತೆ ಹಿಂದಿನ ಜನ್ಮಗಳನ್ನು ನೋಡಿಕೊಂಡು ಆ ಹಿಂದಿನದನ್ನೂ ಸಹ ನೆನಪಿಗೆ ತಂದುಕೊಂಡರೆ ಅವರ ಪರಿಸ್ಥಿತಿ ಹೇಗಿರುತ್ತದೆಯೋ ಊಹಿಸಿಕೊಳ್ಳಿ, ಅವರು ಜೀವಿಸಬಲ್ಲರೇ? ಆಲೋಚಿಸಿರಿ.

ಅಷ್ಟೇಅಲ್ಲ ಹಿಂದಿನ ಜನ್ಮಗಳ ನೆನಪು ಇದ್ದರೇ ಎಲ್ಲಾ ಅಸ್ತವ್ಯಸ್ತವೇ, ಎಲ್ಲಾ ಜಗಳಗಳೇ, ಎಲ್ಲಾ ಅಕ್ರಮಗಳೇ, ಏಕೆಂದರೆ ಯಾರಾದರೂ ಹಿಂದಿನ ಜನ್ಮ ನೋಡಿಕೊಂಡಿದ್ದಾರೆ ಎಂದುಕೊಳ್ಳೋಣ. ಒಂದು ವೇಳೆ ಈಗಿನ ಇರುವ ಹೆಂಡತಿ ಹಿಂದಿನ ಜನ್ಮದಲ್ಲಿ ಇವರ ತಾಯಿ ಎಂದು ತಿಳಿದಿದೆ ಎಂದುಕೊಳ್ಳೋಣ. ಆಗ ಇವರ ಪರಿಸ್ಥಿತಿ ಏನು? ಈಗ ಹೆಂಡತಿಯ ಜೊತೆ ಸಂಸಾರ ಮಾಡಬಲ್ಲರೇ? ಅದೇರೀತಿ ಇನ್ನೊಬ್ಬರ ಮಗ ಹಿಂದಿನ ಜನ್ಮದಲ್ಲಿ ಇವರ ಕಡುವೈರಿ ಎಂದು ತಿಳಿಯಿತು, ಆಗ ಅವರಿಬ್ಬರ ಪರಿಸ್ಥಿತಿ ಹೇಗಿರುತ್ತದೆ? ಪುನಃ ದ್ವೇಶ ಸಾಧಿಸಲು ಪ್ರಯತ್ನಿಸಿದರೆ ಆ ಸಂಸಾರ ಹೇಗಿರುತ್ತದೆ, ಅದೇರೀತಿ ಒಬ್ಬಾಕೆ ಈಗಿನ ತನ್ನ ಗಂಡನೇ ಹಿಂದಿನ ಜನ್ಮದಲ್ಲಿ ತನ್ನ ತಂದೆ ಎಂದು ತಿಳಿದುಕೊಂಡರೆ ಆಗ ಆಕೆ ಗಂಡನೊಂದಿಗೆ ಸಂಸಾರ ಮಾಡಬಲ್ಲಳೇ? ಹೇಳಿ? ಹೀಗೆ ಹಿಂದಿನ ಜನ್ಮಗಳಲ್ಲಿ ಇಂತಹ ವಿಷಯಗಳು ತಿಳಿದರೆ ಪರಿಸ್ಥಿತಿ ಏನು? ಅದಕ್ಕೇ ಈ ಸೃಷ್ಟಿಯಲ್ಲಿ ಹಿಂದಿನ ಜನ್ಮಗಳ ಮರೆವು ಎಂಬುದನ್ನು ಕೊಡಲ್ಪಟ್ಟಿದೆ. ಈ ಮರೆವು ಎಂಬುದು ಒಳ್ಳೆಯದಕ್ಕೋಸ್ಕರವೇ ಹೊರತು ಬೇರೆ ಯಾವುದಕ್ಕೂ ಅಲ್ಲ. ಈ ವಿಷಯಗಳು ನಮಗೆ ತಿಳಿಯದೇ ಹೋಗಬಹುದು ಆದರೆ ಸೃಷ್ಟಿ ಮಾಡಿದವನಿಗೆ ಅಂದರೆ ಭಗವಂತನಿಗೆ ಗೊತ್ತು. ಅಷ್ಟೇಅಲ್ಲ ಹಿಂದಿನ ಜನ್ಮದಲ್ಲಿನ ನಿಮ್ಮ ಮಕ್ಕಳು ಅವರ ವಾರಸುದಾರರು, ಸಂಸಾರ ಈಗ ಎಲ್ಲಿದೆಯೋ ತಿಳಿದಿದೆ ಎಂದುಕೊಳ್ಳಿ ಅವರು ಬಹಳ ಕಷ್ಟಗಳನ್ನು ಅನುಭವಿಸುತ್ತಿದ್ದಾರೆ ಎಂದುಕೊಳ್ಳಿ ಅವರೆಲ್ಲರನ್ನೂ ಈಗ ನೀವು ಪೋಷಿಸಬಲ್ಲಿರಾ? ನಿಮ್ಮ ಸಂಸಾರವನ್ನೇ ನೀವು ಈಜಲಾರದೇ ಹೋಗುತ್ತಿದ್ದರೆ! ಅವರೆಲ್ಲರನ್ನೂ ಹೇಗೆ ಪೋಷಿಸುತ್ತೀರಾ? ಆದ್ದರಿಂದ ಹಿಂದಿನ ಜನ್ಮಗಳನ್ನು ತಿಳಿದುಕೊಳ್ಳಬೇಕೆಂಬ ಆತುರತೆ, ಕುತೂಹಲಗಳನ್ನು ಬಿಟ್ಟುಬಿಡಿ. ಈಗಿನ ಬಗ್ಗೆ, ಈಗಿನ ಜೀವನದ ಬಗ್ಗೆ, ಈಗಿನ ಜೀವನದಲ್ಲಿ ಏನು ಮಾಡಬೇಕೆಂಬುದನ್ನು ಆಲೋಚಿಸಿ, ಆಗಿಹೋದ, ನಡೆದುಹೋದ ವಿಷಯಗಳ ಬಗ್ಗೆ ಆಸಕ್ತಿ ತೋರಿಸಬೇಡಿ. ಏನೇ ಆದರೂ

ವರ್ತಮಾನದಲ್ಲಿ ಜೀವಿಸಲು ಪ್ರಯತ್ನಿಸಿ, ಅದೇ ಜ್ಞಾನಿ ಲಕ್ಷಣ. ಅದೇ ಉತ್ತಮವೆಂದು ತಿಳಿದುಕೊಳ್ಳಿ.

ಏಕೆಂದರೆ ಕೆಲವರು ನಮಗೆ ಸಲಹೆ ಕೊಡಬಹುದು, ಹಿಂದಿನ ಜನ್ಮ ನೋಡಿಕೊಂಡರೆ ಈಗಿನ ನಮ್ಮ ಸಮಸ್ಯೆಗೆ ಕಾರಣ ತಿಳಿದುಕೊಳ್ಳಬಹುದು ಇದರಿಂದ ಸಮಸ್ಯೆಯನ್ನು ಪರಿಷ್ಕರಿಸಿಕೊಳ್ಳಬಹುದು ಎಂದು ಹೇಳುತ್ತಾರೆ. ಆದರೆ ಪತ್ರೀಜಿ ನಿಮಗೆ ಹೇಳುವುದೇನೆಂದರೆ ಯಾವುದೇ ಸಮಸ್ಯೆಗಾದರೂ ಹಿಂದಿನ ಜನ್ಮಗಳಲ್ಲಿ ನಾವು ಮಾಡಿದ ಕರ್ಮಗಳೇ ಕಾರಣ. ಆದ್ದರಿಂದ ಸಮಸ್ಯೆಗಳು ಬಗೆಹರಿಯಬೇಕೆಂದರೆ ಕರ್ಮಗಳು ಹೋಗಬೇಕು. ಎಲ್ಲಾ ಸಮಸ್ಯೆಗಳು ತಂತಾನೇ ಹೋಗುತ್ತವೆ. ಅದಕ್ಕೆ ಹಿಂದಿನ ಜನ್ಮ ನೋಡಿಕೊಳ್ಳುವ ಅವಶ್ಯಕತೆ ಇಲ್ಲ.

ಇನ್ನೂ ಆಲೋಚಿಸಿ ಒಂದು ವೇಳೆ ನಮ್ಮ ಹಿಂದಿನ ಜನ್ಮ ನೋಡಿಕೊಂಡು ಒಂದು ಸಮಸ್ಯೆಯನ್ನು ಪರಿಷ್ಕರಿಸಿಕೊಂಡಿದ್ದೇವೆ ಎಂದುಕೊಳ್ಳಿ ಇನ್ನುಮುಂದೆ ಸಮಸ್ಯೆಗಳು ಬರುವುದಿಲ್ಲವೇ? ಅಂದರೆ ಜೀವನದಲ್ಲಿ ಬರುತ್ತಲೇ ಇರುತ್ತವೆ. ಒಂದು ಕಷ್ಟದ ನಂತರ ಇನ್ನೊಂದು ಕಷ್ಟ, ಒಂದು ಸಮಸ್ಯೆಯ ನಂತರ ಇನ್ನೊಂದು ಸಮಸ್ಯೆ. ಇವುಗಳಿಗೆ ಕೊನೆ ಎಲ್ಲಿ? ಅಷ್ಟೇಅಲ್ಲ, ನಾವು ಹಿಂದೆ ಎಷ್ಟೋ ಜನ್ಮಗಳನ್ನೆತ್ತಿರುತ್ತೇವೆ, ಯಾವುದೋ ಒಂದು ಜನ್ಮವನ್ನು ನೋಡಿಕೊಂಡ ಮಾತ್ರಕ್ಕೆ ಏನು ಸರಿಹೋಗುತ್ತದೆ? ಅವನ್ನೆಲ್ಲಾ ಸಿನಿಮಾ ರೀಲುಗಳಂತೆ ಯಾರಾದರೂ ನಮಗೆ ತೋರಿಸಬಲ್ಲರೇ? ಅದು ಯಾರಿಗಾದರೂ ಸಾಧ್ಯವೇ?

ಆದ್ದರಿಂದ ಯಾವುದೋ ಒಂದು ಸಮಸ್ಯೆಗೋಸ್ಕರ ಹಿಂದಿನ ಜನ್ಮ ನೋಡಿಕೊಳ್ಳುವುದಕ್ಕಿಂತ ಈಗಿನ ಸಮಸ್ಯೆಗಳಿಗೆ ಕಾರಣ ತಿಳಿದುಕೊಂಡು ಅವುಗಳಿಂದ ಶಾಶ್ವತವಾಗಿ ಹೊರಬರುವುದಕ್ಕೆ ಪ್ರಯತ್ನಿಸಿ. ಸಮಸ್ಯೆಗಳು ಬರದಂತೆ ಮಾಡಿಕೊಳ್ಳಲು ಪ್ರಯತ್ನಿಸಿ. ವಿನೋದಕ್ಕೋಸ್ಕರ ಇಲ್ಲಸಲ್ಲದ ಹೊಸ ಸಮಸ್ಯೆಗಳನ್ನು ಸೃಷ್ಟಿಸಿಕೊಳ್ಳಬೇಡಿ. ನಿಮ್ಮ ಸಾಧನೆ ನೀವು ಮಾಡುತ್ತಿದ್ದರೆ, ಏನಾದರೂ ಅವಶ್ಯಕತೆಯಿದ್ದರೆ ನಿಮ್ಮಷ್ಟಕ್ಕೆ ನೀವೇ ನಿಮ್ಮ ಹಿಂದಿನ ಜನ್ಮಗಳನ್ನು ನೋಡಿಕೊಳ್ಳಬಲ್ಲಿರಿ ಹಾಗೆ ನೋಡಿಕೊಂಡಿದ್ದೀರೆಂದರೆ ಅದು ಅವಶ್ಯಕವೆಂದು ಅರ್ಥ. ಒಂದು ವೇಳೆ ಹಿಂದಿನ ಜನ್ಮಗಳನ್ನು ನೀವು ನೋಡಲಾರದೇ ಹೋದರೆ ಅದು ನಿಮಗೆ ಅವಶ್ಯಕತೆ ಇಲ್ಲವೆಂದು ತಿಳಿದುಕೊಳ್ಳಬೇಕು, ಏಕೆಂದರೆ ಈ ಸೃಷ್ಟಿಯಲ್ಲಿ **"ಮಾಡಬೇಕಾದ್ದನ್ನು ಮಾಡಿದರೆ ಹೊಂದಬೇಕಾದದ್ದು ಹೊಂದುತ್ತಾರೆ"**. ಆದ್ದರಿಂದ ಬಯಸುವ ಕೆಲಸ ಇಲ್ಲ, ಆದ್ದರಿಂದ ವಿನೋದಗಳಿಗೋಸ್ಕರ ಖರ್ಚು ಮಾಡುವ ಹಣವನ್ನು ಲೋಕಕಲ್ಯಾಣಕ್ಕೋಸ್ಕರ ಖರ್ಚುಮಾಡಿ. ನಿಮ್ಮ ಜ್ಞಾನವನನ್ನು ಅಭಿವೃದ್ಧಿಸಿಕೊಳ್ಳಲು ಖರ್ಚು ಮಾಡಿ. ಹಾಗೆ ಮಾಡಿದರೆ ಲಾಭಪಡುತ್ತೀರಿ. ಆದರೆ ವಿನೋದಗಳಿಗೋಸ್ಕರ ಖರ್ಚು ಮಾಡಿದರೆ ಪ್ರಯೋಜನವೇನಿರುತ್ತದೆ.

ಆದ್ದರಿಂದ ಹಿಂದಿನ ಜನ್ಮಗಳನ್ನು ನೋಡಿಕೊಳ್ಳಲು ಆತುರ ಪಡಬೇಡಿ ನಿಮ್ಮ ಸಾಧನೆ ನೀವು ಮಾಡಿ. ಅವಶ್ಯಕತೆ ಇದ್ದರೆ ಆಟೋಮ್ಯಾಟಿಕ್‌ಆಗಿ ನೀವೇ ನೋಡಿಕೊಳ್ಳುತ್ತೀರ.

ನಿಮ್ಮ ಜ್ಞಾನದ ಪರಿಧಿ ಹೆಚ್ಚುತ್ತಾ ಹೋದಂತೆ ಹಿಂದಿನ ಜನ್ಮಗಳನ್ನು ನೋಡಿಕೊಂಡರೂ ಪರವಾಗಿಲ್ಲ.

ಅಷ್ಟೇ ಅಲ್ಲ ಕೆಲವರು ಕೆಲವು ದೃಷ್ಯಗಳನ್ನು ನೋಡಿ, ಕೆಲವು ಪ್ರದೇಶಗಳನ್ನು ನೋಡಿ ತಮಗೆ ಮೂರನೇ ಕಣ್ಣು ಉತ್ತೇಜನಗೊಂಡಿದೆಯೆಂದು ಉಬ್ಬಿಹೋಗುತ್ತಾರೆ, ನಾವು "ಥರ್ಡ್ ಐ ಮಾಸ್ಟರ್" ಆಗಿದ್ದೆವೆಂದು ಹೇಳಿಕೊಳ್ಳುತ್ತಾರೆ. ತಾವೇನೋ ಎಲ್ಲರಿಗಿಂತ ಉನ್ನತ ಸ್ಥಿತಿಯಲ್ಲಿರುವಂತೆ ಭಾವಿಸುತ್ತಾರೆ. ಆದರೆ ಇದು ಪ್ರರಂಭ ಸ್ಥೀತಿಯೇ ಹೊರತು ಪೂರ್ಣಸ್ಥಿತಿಯಲ್ಲ. ಪೂರ್ಣಸ್ಥಿತಿಗೆ ಸೇರಬೇಕಾದರೆ ಇನ್ನೂ ಎಷ್ಟೋ ಸಾಧನೆ ಮಾಡಬೇಕು. ಎಷ್ಟೋ ಪರೀಕ್ಷೆಗಳನ್ನೆದುರಿಸಬೇಕು. ಏಕೆಂದರೆ ಕೇವಲ ದೃಶ್ಯಗಳು ಕಂಡ ತಕ್ಷಣವೇ ಉನ್ನತ ಸ್ಥಿತಿಗೆ ಬೆಳೆದಂತೆ ಪ್ರತೀ ಜಾಗದಲ್ಲಿಯೂ ನನಗೆ ಅದು ಕಾಣಿಸಿತು, ನಾನು ಇದನ್ನು ನೋಡಿದೆ ಎಂದು ಹೇಳಿಕೊಳ್ಳುತ್ತಿರುತ್ತಾರೆ. ತೀರಾ ಇಂತಹ ಅನುಭವಗಳು ಎಷ್ಟು ದಿನಗಳು ಧ್ಯಾನ ಮಾಡಿದರೆ ಬಂದಿದೆ ಅದರೆ ಕೆಲವು ತಿಂಗಳುಗಳೋ, ವರ್ಷಗಳೋ ಹೇಳುತ್ತಾರೆ. ಆದರೆ ನೀವೇನಾದರೂ ಒಂದು ನರ್ಸರಿ ಸ್ಕೂಲ್‌ಗೆ ಹೋಗಿ ಅಲ್ಲಿರುವ ಮಕ್ಕಳಿಂದ 15 ನಿಮಿಷ ಧ್ಯಾನ ಮಾಡಿಸಿ ಅವರ ಅನುಭಗಳನ್ನು ಕೇಳಿ, ಅವರೆಲ್ಲಾ ಏನೋ ಒಂದು ನೋಡಿದಿವೆಂದು ಅಂದರೆ ಸಸ್ಯಗಳೆಂದು, ಬೆಟ್ಟಗಳೆಂದು, ಸಮುದ್ರವೆಂದು, ಬಣ್ಣಗಳೆಂದು ಯಾವುದೋ ಒಂದು ನೋಡಿದೆವೆಂದು ಹೇಳುತ್ತಾರೆ. ಇನ್ನೂ ನಮಗೆ ಸಾಯಿಬಾಬಾ ಕಾಣಿಸಿದರು, ವೆಂಕಟೇಶ್ವರಸ್ವಾಮಿ ಕಾಣಿಸಿದರೆಂದು ಸಹ ಕೆಲವರು ಹೇಳುತ್ತಾರೆ. ಅಂದರೆ 15 ನಿಮಿಷ ಧ್ಯಾನ ಮಾಡಿದ ಮಕ್ಕಳೆಲ್ಲಾ 'ಥರ್ಡ್ ಐ ಮಾಸ್ಟರ್ಸ್' ಅಲ್ಲವೇ? ಅಂದರೆ ನೀವು ವರ್ಷಗಳು ಕಾಲುಗಂಟೆಯಲ್ಲಿ ಸಂಪಾದಿಸಿದರು ಅಲ್ಲವೇ? ಇಷ್ಟಕ್ಕೂ ಯಾರು ಶ್ರೇಷ್ಟರು? ಹೇಳಿ. ಆದ್ದರಿಂದ ಇಂತಹ ಅನುಭವಗಳು ಬಂದರೆ ಉನ್ನತ ಸ್ಥಿತಿಗೆ ಹೋದಂತೆ ಅಲ್ಲ. ಇವೆಲ್ಲಾ ಮುಖ್ಯವಲ್ಲ, ವಾಸ್ತವವಾಗಿ ನಮ್ಮಲ್ಲಿ, ನಿಮ್ಮ ವರ್ತನೆಯಲ್ಲಿ ಎಷ್ಟು ಬದಲಾವಣೆ ಬಂದಿದೆ, ನಿಮ್ಮ ಜ್ಞಾನ ಎಷ್ಟು ಹೆಚ್ಚಿದೆ? ಎಂಬುದೇ ಮುಖ್ಯವೆಂದು ತಿಳಿದುಕೊಳ್ಳಿ. ನಿಜವಾದ ಜ್ಞಾನವಂತರಾದರೆ ಇಂತಹವುಗಳನ್ನೆಲ್ಲಾ ಹೇಳಿಕೊಳ್ಳುವುದಿಲ್ಲ. ಅದಕ್ಕೇ ಪತ್ರಿಯವರು "ಮುಮುಕ್ಷುಗಳ ಶತ್ರುಗಳು" ಎಂದು ಹೇಳುತ್ತಾ "ಸಾದಕರಿಗೆ ಬರುವ ಪರಿಮಿತ ಜ್ಞಾನವನ್ನೇ ಪರಿಪೂರ್ಣ ಜ್ಞಾನವೆಂದುಕೊಳ್ಳುವ" ಸಾಧ್ಯತೆ ಇದೆ. ಇದು ಪತನಕ್ಕೆ ದಾರಿಯಾಗುತ್ತದೆ ಎಂದು ಹೇಳುತ್ತಾರೆ. ಅದೇರೀತಿ ಹಲವರು "ಸೂಕ್ಷ್ಮಶರೀರಯಾನ" ಮಾಡಬೇಕೆಂದು ತುಂಬಾ ಉತ್ಸುಕರಾಗಿರುತ್ತಾರೆ. ಎಷ್ಟು ದಿನಗಳು ಧ್ಯಾನ ಮಾಡಿದರೂ ಈ ಅನುಭವ ಬಾರದೇ ಹೋದರೆ ನಿರುತ್ಸಾಹ ಪಡುತ್ತಾರೆ. ಆದರೆ ಈ ಅನುಭವ ಸಹ ಪ್ರಕೃತಿಯಲ್ಲಿ ಅವಶ್ಯಕತೆಯಿರುವವರಿಗೆ ಅವಶ್ಯಕತೆ ಇರುವಾಗಲೇ ಉಂಟಾಗುತ್ತದೆ. ಅಷ್ಟೇ ಹೊರತು ಆಸೆ ಪಟ್ಟ ಮಾತ್ರಕ್ಕೆ ಈ ಅನುಭವ ಬರುವುದಿಲ್ಲ. ಈ ಸೂಕ್ಷ್ಮಶರೀರಯಾನ ಎಂಬುದು ಪ್ರತಿಯೊಬ್ಬರಿಗೂ ರಾತ್ರಿ ನಿದ್ರೆಯ ಸಮಯದಲ್ಲಿ ನಡೆಯುತ್ತಲೇ ಇರುತ್ತದೆ. ಆ ಅನುಭವಗಳೇ ಕನಸುಗಳ ರೂಪದಲ್ಲಿ, ಮಧ್ಯದಲ್ಲಿ ಕೆಲವು ವಿಷಯಗಳು ಸ್ಮರಣೆಗೆ ಬರುವುದರ ಮೂಲಕ ತಿಳಿಯುತ್ತಿರುತ್ತದೆ. ಸ್ವಲ್ಪ ಗಮನಿಸಿದರೆ

ಕೆಲವು ಹೊಸ ವಿಷಯಗಳು ಈ ವಿಧದಲ್ಲಿಯೇ ತಿಳಿಯುತ್ತವೆಂದು ಅರ್ಥವಾಗುತ್ತದೆ.

ಆದ್ದರಿಂದ ಈ ಅನುಭವದ ಬಗ್ಗೆ ಸಹ ಆಶಿಸಬೇಡಿ ಆ ಅನುಭವ ಬರದೇಹೋದರೆ ನಿಮ್ಮ ಸಾದನೆ ಕಡಿಮೆಯೆಂದು ಭಾವಿಸಬೇಡಿ. ನಿಮ್ಮಲ್ಲಿ ಬರುವ ಬದಲಾವಣೆಯೇ, ನಿಮ್ಮ ಸಾಧನೆಗೆ ಅಳತೆಗೋಲು ಎಂದು ತಿಳಿದುಕೊಳ್ಳಿ. ಹಾಗೆಯೇ ಕೆಲವರು ಧ್ಯಾನದಲ್ಲಿ ಅವರು ಕಾಣಿಸಿದರು, ಇವರು ಕಾಣಿಸಿದರು ಅವರು ನನಗೆ ಸಂದೇಶ ಕೊಟ್ಟರೆಂದು ಹೇಳುತ್ತಿರುತ್ತಾರೆ ಇಂತಹ ಅನುಭವಗಳಿಗೆ ಸಹ ತುಂಬಾ ಸಂತೋಷಪಡುವ ಅವಶ್ಯಕತೆ ಇಲ್ಲ, ದೊಡ್ಡದಾಗಿ ಹೇಳಿಕೊಳ್ಳುವ ಅವಶ್ಯಕತೆಯಿಲ್ಲ. ಯಾವುದಾದರೂ ಸಂದೇಶಗಳು ಬಂದರೆ ಅವುಗಳನ್ನು ಗ್ರಹಿಸಿ ಅವುಗಳನ್ನು ಆಚರಿಸುವ ಪ್ರಯತ್ನಮಾಡಿ ಸಾಕು. ಇದು ಅರ್ಥವಾಗದೇ ಕೆಲವರು ಸಲಹೆ ಮೇರೆಗೆ ಬಹಳಷ್ಟು ಜನ ಧ್ಯಾನದಲ್ಲಿ 'ಮಾಸ್ಟರ್ಸ್'ನ್ನು ಕರೆಯುವುದು ಅವರಿಗೆ ಆ ಪ್ರಶ್ನೆಗಳು, ಈ ಪ್ರಶ್ನೆಗಳನ್ನು ಕೇಳುವುದು ಮಾಡುತ್ತಿರುತ್ತಾರೆ ನಾನು ಕರೆದರೆ ಅವರು ಬಂದರು, ಇವರು ಬಂದರು, ಆ ಮಾಸ್ಟರ್ ನನಗೆ ಅದು, ಇದು ಹೇಳಿದರು ಎಂದು ಎಲ್ಲರಿಗೂ ಹೇಳುತ್ತಿರುತ್ತಾರೆ.

ಆದರೆ ತಿಳಿದುಕೊಳ್ಳಿ ಈ ಸೃಷ್ಟಿಯಲ್ಲಿ ಪ್ರತ್ಯೇಕಿಸಿ ಯಾವುದನ್ನೂ ಕೇಳಬೇಕಾದ ಅಗತ್ಯವಿಲ್ಲ, ಬಯಸಬೇಕಾದ ಕೆಲಸವಿಲ್ಲ. **"ಮಾಡಬೇಕಾದ ಧ್ಯಾನ ಸಾಧನೆ ಮಾಡಿದರೆ ಹೊಂದಬೇಕಾದ ಅನುಭವಗಳು, ಬೇಕಾದ ಸಂದೇಶಗಳು ಅವಷ್ಟಕ್ಕೆ ಅವೇ ಬರುತ್ತದೆಂದು ತಿಳಿದುಕೊಳ್ಳಿ"**. ಹಾಗೆ ನಿರ್ಣಯವನ್ನು ಪ್ರಕೃತಿಗೆ ಬಿಡದೇ ಯಾವಾಗ ಬೇಕೋ ಆವಾಗ, ಯಾರು ಬೇಕೋ ಅವರು ಬರಬೇಕೆಂದು ಕೇಳಿದರೆ ಅಂದರೆ ಕೋರಿದರೆ ಹಾಗೇನಾದರೂ ಆದರೆ ನೀವು ಕಷ್ಟಪಟ್ಟು ಸಾಧನೆ ಮಾಡಿ ಸಂಪಾದಿಸಿಕೊಂಡ ಶಕ್ತಿಯನ್ನೆಲ್ಲಾ ಕಳೆದುಕೊಳ್ಳುತ್ತೀರೆಂದು ತಿಳಿದುಕೊಳ್ಳಿ.

ಏಕೆಂದರೆ ಇಂತಹ ಅನುಭವಗಳು ಕೆಲವರಿಗಷ್ಟೇ ಬರುತ್ತವೆ. ಎಲ್ಲರಿಗೂ ಬರುವುದಿಲ್ಲ. ಅದಕ್ಕೆ ಮುಖ್ಯ ಕಾರಣ ಶಕ್ತಿಯನ್ನು ಸಂಪಾದಿಸಿಕೊಂಡಿದ್ದಾರೆಂದು ಅರ್ಥ. ಮತ್ತೆ ಕೆಲವರಿಗೆ ಅಂತಹ ಅನುಭವ ಉಂಟಾಗದೇ ಇದ್ದರೆ ಸಾಕಾಗುವಷ್ಟು ಶಕ್ತಿ ಇಲ್ಲವಂದೇ ಅರ್ಥ. ಯಾವುದು ಏನೇ ಆದರೂ ನಿರ್ಣಯವನ್ನು ಪ್ರಕೃತಿಗೇ ಬಿಟ್ಟುಬಿಡಬೇಕು ಹಾಗಲ್ಲದೇ ನೀವು ಪ್ರತ್ಯೇಕಿಸಿ ಕೋರಿದರೆ ಅದಕ್ಕೆ ನೀವು ಸ್ವಲ್ಪ ಮೌಲ್ಯವನ್ನು ತೆರಬೇಕಾಗಿರುತ್ತದೆ. ಪುರಾಣಗಳಲ್ಲಿನ ವಿಶ್ವಾಮಿತ್ರನ ಕಥೆ ನೋಡಿದೆವಲ್ಲವೇ? ಆದ್ದರಿಂದ ಸಾಧನೆ ಮಾಡಿ, ಶಕ್ತಿಯನ್ನು ಹೆಚ್ಚಿಸಿಕೊಳ್ಳಿ ಗುಣಗಳ್ನು ಬದಲಾಯಿಸಿಕೊಳ್ಳಿ ಪರಿವರ್ತನೆ ಬದಲಾಗಿದೆಯೇ ಇಲ್ಲವೇ? ನೋಡಿಕೊಳ್ಳಿ ಜ್ಞಾನ ಎಷ್ಟರವರೆಗೆ ಹೆಚ್ಚಾಗಿದೆಯೋ ನೋಡಿಕೊಳ್ಳಿ. ಅಷ್ಟೇ ಹೊರತು ನಾನೇನು ಮಾಡಬೇಕು? ಅದು ಏಕೆ ನಡೆಯುತ್ತದೆ? ಇದೇಕೆ ಸಂಭವಿಸುತ್ತದೆ? ಎನ್ನುತ್ತಾ ಅವರಿವರ ಬಗ್ಗೆ, ಅದರ ಬಗ್ಗೆ ಇದರ ಬಗ್ಗೆ ಕೇಳಿದರೆ ಕಷ್ಟಪಟ್ಟು ಸಾಧನೆ ಮಾಡಿ ಸಂಪಾದಿಸಿದ ಶಕ್ತಿಯನ್ನೆಲ್ಲಾ ಕಳೆದುಕೊಳ್ಳುತ್ತಾರೆ. ಪುನಃ ಸಾಮಾನ್ಯ ಮನುಷ್ಯರಾಗಿಬಿಡುತ್ತಾರೆ.

## ಮುಮುಕ್ಷುವಿನ ಶತ್ರುಗಳು



ನಾಲ್ಕು ವಿಧದ ಶತ್ರುಗಳಿಂದ ಮುಮುಕ್ಷು ಎಂಬುವವನು ತನ್ನನ್ನು ತಾನು ರಕ್ಷಿಸಿಕೊಳ್ಳಬೇಕು. ಅವು:

1) ಭಯ. 2) ಪರಿಮಿತ ಜ್ಞಾನ 3) ಸಿದ್ಧಿಗಳ ಮೂಲಕ ಬರುವ ಅಹಂಕಾರ. 4) ವೃದ್ಧಾಪ್ಯದಲ್ಲಿ ಸೋಮಾರಿತನದ ಭಾವನೆಗಳು.

1) "ಭಯ" ಎಂಬುದು ಮುಮುಕ್ಷುವಿನ ಮೊದಲನೆಯ ಶತ್ರು. ಮುಮುಕ್ಷು ಮೊದಲಿಗೆ ಎಲ್ಲಾ ವಿಧದ ಭಯಗಳನ್ನು ಜಯಿಸಬೇಕು. ಆಗಲೇ "ಜ್ಞಾನ"ವೆಂಬುದು ವೊಳಕೆ ಯೊಡೆಯುತ್ತದೆ. ಆದರೆ ಪ್ರಾಥಮಿಕ, ಪರಿಮಿತ ಜ್ಞಾನವನ್ನೇ "ಪೂರ್ಣ ಜ್ಞಾನ" ಎಂದುಕೊಳ್ಳುವ ಅಪಾಯ ಯಾವಾಗಲೂ ಇರುತ್ತದೆ.

2)"ಪರಿಮಿತ ಜ್ಞಾನ"ಎಂಬುದೇ ಎರಡನೆಯ ಶತ್ರು. ಆ ಗಂಡಾಂತರದಿಂದ ಪಾರಾದರೆ ಸಿದ್ದಿಗಳು ಲಭಿಸುತ್ತವೆ. ಸಿದ್ದಿಗಳು ಲಭಿಸಿ ಅಹಂಕಾರ ಬಂದರೆ ಅದು ಪುನಃ ಪತನಕ್ಕೆ ದಾರಿ ಮಾಡಿಕೊಡುತ್ತದೆ. ಸಿದ್ದಿಗಳನ್ನು ಸಂಪಾದಿಸಲೇಬೇಕು. ಆದರೆ ಅಹಂಕಾರ ಬರದಂತೆ ನಮ್ಮನ್ನು ನಾವು ಕಾಪಾಡಿಕೊಳ್ಳಬೇಕು.

3) "ಸಿದ್ದಿಗಳ ಮೂಲಕ ಬರುವ ಅಹಂಕಾರ" ಎಂಬುದೇ ಮುಮುಕ್ಷುವಿನ ಮೂರನೇ ಶತ್ರು. ಅದನ್ನು ಜಯಿಸಿದ ನಂತರವೂ ಸಹ ಕಟ್ಟಕಡೆಯವರೆಗೂ ಸೋಮಾರಿತನಕ್ಕೆ ಅಂದರೆ "ವೃದ್ಧಾಪ್ಯದ ಸೋಮಾರಿತನದ ಭಾವನೆಗಳಿಗೆ" ಎಂದಿಗೂ ಒಳಗಾಗಬಾರದು.

4)"ವೃದ್ಧಾಪ್ಯದ ಸೋಮಾರಿತನದ ಭಾವನೆ"ಎಂಬುದು ಮುಮುಕ್ಷು ವಿನ ಅಂತಿಮ ಶತ್ರು. ಭಯ, ಪರಿಮಿತ ಜ್ಞಾನ, ಸಿದ್ದಿಗಳು ಸೃಷ್ಟಿಸುವ ಅಹಂಕಾರ, ವೃದ್ಧಾಪ್ಯದ ಸೋಮಾರಿತನದ ಭಾವನೆಗಳು... ಈ ನಾಲ್ಕು ಶತ್ರುಗಳನ್ನೂ ಜಯಿಸಬೇಕು. ಆಗಿಂದಾಗೆ ಈ ಶತ್ರುಗಳ ಮುಷ್ಟಿಯಿಂದ ತಪ್ಪಿಸಿಕೊಳ್ಳುತ್ತಾ ಇರಬೇಕು. ಆಗಿಂದಾಗ್ಗೆ ಈ ಶತ್ರುಗಳಿಂದ ರಕ್ಷಿಸಿಕೊಳ್ಳುತ್ತಾ ಇರಬೇಕು.

ಪುರಾಣಗಳಲ್ಲಿ ಅತೀಂದ್ರಿಯ ಶಕ್ತಿಗಳ ಬಗ್ಗೆ : ಅತೀಂದ್ರಿಯ ಶಕ್ತಿಗಳು ಎನ್ನುವಂತಹವು ಪೂರ್ವ ಜ್ಞಾನವಲ್ಲ. ಪೂರ್ಣ ಜ್ಞಾನವನ್ನು ಸಂಪಾದಿಸಿಕೊಳ್ಳುವ ಮಾರ್ಗವಷ್ಟೇ ಎಂದು ತಿಳಿದುಕೊಳ್ಳಬೇಕು. ಆದ್ದರಿಂದ ಗುರಿಯನ್ನು ಪೂರ್ಣ ಜ್ಞಾನದ ಮೇಲೆಯೇ ಇರಿಸಬೇಕು. ಅತೀಂದ್ರಿಯ ಶಕ್ತಿಗಳನ್ನು ನೋಡಿಕೊಂಡು ಅಹಂಕಾರ ಪಟ್ಟು ಪತನವಾದವರು ಪುರಾಣಗಳಲ್ಲಿ ಬಹಳಷ್ಟು ಜನ ಕಾಣಿಸುತ್ತಾರೆ. ಅದೇರೀತಿ ಅತೀಂದ್ರೀಯ ಶಕ್ತಿಗಳು,

ಸಿದ್ದಿಗಳನ್ನು ಹೊಂದಿದ್ದರೂ ಅವುಗಳ ಬಗ್ಗೆ ಆಲೋಚಿಸದೆ ಏನೂ ಇಲ್ಲದಂತೆ ಪ್ರವರ್ತಿಸಿ, ಪೂರ್ಣಜ್ಞಾನಿಯಾಗಿ ಬದಲಾದವರು ನಮಗೆ ಪುರಾಣಗಳಲ್ಲಿ ಕಾಣಿಸುತ್ತಾರೆ. ಆದ್ದರಿಂದ ಮೇಲಿನ ವಿಷಯಗಳ ಬಗ್ಗೆ ಪುರಾಣಗಳಲ್ಲಿನ ಕೆಲವು ಸನ್ನಿವೇಶಗಳನ್ನು ತಿಳಿದುಕೊಳ್ಳೋಣ.

ರಾಮಾಯಣದಲ್ಲಿ ವಾನರ ರಾಜ, ವೀರನಾದ 'ವಾಲಿ' ಅತ್ಯಂತ ಬಲಶಾಲಿ, ಸಿದ್ಧಿಯನ್ನು ಹೊಂದಿದ್ದನು. ಆತನಿಗೆ ಅವನ ಮುಂದೆ ಇರುವ ವ್ಯಕ್ತಿಗಳಲ್ಲಿನ ಶಕ್ತಿಯನ್ನು ಬರಿದು ಮಾಡುವ ಅಂದರೆ ಕಸಿದುಕೊಳ್ಳುವ ಶಕ್ತಿ ಅಂದರೆ ಸಿದ್ಧಿ ಇತ್ತು. ಅದಕ್ಕಾಗಿಯೇ ಶ್ರೀರಾಮನು ಮರದ ಹಿಂದೆ ನಿಂತು ಆತನನ್ನು ಕೊಲ್ಲಬೇಕಾಯಿತು.

ಅಂತಹ ಬಲಶಾಲಿ, ಸಿದ್ಧಿಯನ್ನು ಹೊಂದಿದ್ದ 'ವಾಲಿ' ಗರ್ವದಿಂದ ಅಹಂಕಾರದಿಂದ ತಮ್ಮನಾದ ಸುಗ್ರೀವನನ್ನು ಓಡಿಸಿ ಅವನ ಹೆಂಡತಿಯನ್ನು ಸೆರೆಹಿಡಿದನು. ಅಂದರೆ ಸ್ತ್ರೀ ಲೋಲನಾದನು. 'ಕಾಮಕ್ಕೆ' ವಶನಾದನು. ಅಕ್ರಮವಾಗಿ ಪ್ರವರ್ತಿಸಿದನು. ಸೃಷ್ಟಿಗೆ ವಿರುದ್ಧವಾಗಿ ಪ್ರವರ್ತಿಸಿದನು. ಕೊನೆಗೆ ಶ್ರೀರಾಮನ ಕೈಯಲ್ಲಿ ಮರಣ ಹೊಂದಿದನು. ಅಂದರೆ ಸರ್ವನಾಶವಾದನು. ಇದನ್ನಾಧರಿಸಿ ಸಿದ್ದಿಗಳಿವೆ ಎಂದು ಅಹಂಕಾರ ಪಡುತ್ತಾ ಅವುಗಳನ್ನು ಉಪಯೋಗಿಸಿಕೊಂಡು ಮಾಡಬಾರದ ಕೆಲಸಗಳನ್ನು ಮಾಡಿದರೆ ಯಾರಾದರೂ ಸರಿ ನಾಶವಾಗುತ್ತಾರೆಂದು ರಾಮಾಯಣದಲ್ಲಿನ ಈ ಸನ್ನಿವೇಶವನ್ನಾಧರಿಸಿ ನಾವು ತಿಳಿದುಕೊಳ್ಳಬಹುದು.

ಅದೇ ರೀತಿ ರಾಮಾಯಣದಲ್ಲಿ ಒಂದು ಮುಖ್ಯ ಪಾತ್ರವಾದಂತಹ ಆಂಜನೇಯ ಸ್ವಾಮಿಗೂ ಸಹ ಬಹಳಷ್ಟು ಸಿದ್ದಿಗಳಿವೆ. ಆದರೆ ಅವರು ಅವುಗಳನ್ನು ನೋಡಿಕೊಂಡು ಅಹಂಕಾರ ಪಡಲಿಲ್ಲ. ಅಹಂಕಾರದಿಂದ ಪ್ರವರ್ತಿಸಲಿಲ್ಲ. ಎಷ್ಟು ಸಿದ್ದಿಗಳಿದ್ದರೂ ಏನೂ ಇಲ್ಲದಂತೆ ಪ್ರವರ್ತಿಸುತ್ತಿದ್ದರು. ಅವರು ಹೇಗಿದ್ದರೆಂದರೆ ಆತನ ಶಕ್ತಿಯನ್ನು ಆತನಿಗೆ ಇನ್ನೊಬ್ಬರು ನೆನಪು ಮಾಡಬೇಕಾಗುತ್ತಿತ್ತು. ಅವನು ನೋಡಿಕೊಂಡು ಅಹಂಕಾರ ಪಡಲಿಲ್ಲ, ಇವೆಯೆಂದು ಬಡಾಯಿ ಕೊಚ್ಚಿಕೊಳ್ಳಲಿಲ್ಲ. ಅಂದರೆ ಅವರಿಗೆ ಎಲ್ಲಾ ಇದ್ದರೂ ಏನೂ ಇಲ್ಲದಂತೆ ಪ್ರವರ್ತಿಸುತ್ತಿದ್ದರು. ಕೆಲವರು ಇರುವುದಕ್ಕಿಂತಲೂ ಹೆಚ್ಚಿನದಾಗಿ ಹೇಳಿಕೊಳ್ಳುತ್ತಿದ್ದಾರೆ. ಆದರೆ ಈಗ ಏನೂ ಇಲ್ಲದಿದ್ದರೂ ಇರುವಂತೆ ಬಡಾಯಿ ಕೊಚ್ಚಿಕೊಳ್ಳುತ್ತಿದ್ದಾರೆ.

ರಾಮಾಯಣದಲ್ಲಿನ ಒಂದು ಸನ್ನಿವೇಶದ ಮೂಲಕ ನಾವು ಈ ವಿಷಯವನ್ನು ತಿಳಿದುಕೊಳ್ಳಬಹುದು. ಸೀತಾನ್ವೇಷಣೆಗೋಸ್ಕರ ಲಂಕೆಗೆ ಸೇರಬೇಕಾದರೆ ಸಮುದ್ರವನ್ನು

ನೂರು ಯೋಜನೆಗಳು ಲಂಘಿಸಬೇಕಾಗಿತ್ತು. ಅಂದರೆ ದಾಟಬೇಕಾಗಿತ್ತು. ಅಲ್ಲಿದ್ದ ವಾನರ ವೀರರೆಲ್ಲರೂ 10, 20, 30, 50 ಹೇಗೆ ಕೆಲವು ಯೋಜನೆಗಳನ್ನು ಲಂಘಿಸುವ ಶಕ್ತಿ ಇದ್ದವರೇ ಹೊರತು ನೂರು ಯೋಜನೆಗಳನ್ನು ಲಂಘಿಸಬಲ್ಲವರು ಯಾರೂ ಇರಲಿಲ್ಲ. ಹಾಗೆ ಯಾರಿಗೆ ಅವರು ತಾವು ನೆಗೆಯಬಲ್ಲ ಶಕ್ತಿಯನ್ನು ಹೇಳಿಕೊಳ್ಳುತ್ತಿದ್ದರು. ಆದರೆ ಆಂಜನೇಯ ಸ್ವಾಮಿ ಏನೂ ಮಾಡಲಾರದಂತೆ, ಒಂದು ಪಕ್ಕದಲ್ಲಿ ಕುಳಿತುಕೊಂಡಿದ್ದರು. ಆಗ ಜಾಂಬವಂಥನು ಆಂಜನೇಯನ ಹತ್ತಿರ ಬಂದು ಏನು? ನೀನು ಹೀಗೆ ಏನೂ ಮಾಡಲಾರದವನಂತೆ ಕುಳಿತುಕೊಂಡಿದ್ದೀಯಾ. ಆ ಕೆಲಸವನ್ನು ನೀನು ಮಾಡಬಲ್ಲೆ. ಆ ಕಾರ್ಯವನ್ನು ನೀನು ಸಾಧಿಸಬಲ್ಲೆ ಎಂದು ಹೇಳಿದ ತಕ್ಷಣವೇ ಹನುಮಂತನು ಆ ಕಾರ್ಯ ಮಾಡಲು ಸಿದ್ಧನಾದನು. ಆ ಕಾರ್ಯವನ್ನು ದಿಗ್ವಿಜಯವಾಗಿ ಪೂರ್ಣಗೊಳಿಸಿ ಹಿಂತಿರುಗಿದನು.

ಇದನ್ನಾದರಿಸಿ ಸಿದ್ದಿಗಳಿದ್ದರೂ ಇಲ್ಲದಂತೆ ಪ್ರವರ್ತಿಸಬೇಕೆಂದು, ಅಹಂಕಾರದಿಂದ ಬೀಗಬಾರದೆಂದು, ಅಂತಹ ಶಕ್ತಿಗಳಿಂದ ಲೋಕಕಲ್ಯಾಣ ಕರವಾದ ಕೆಲಸಗಳನ್ನು ಮಾಡಬೇಕೆಂದು ನಾವು ತಿಳಿಯಬೇಕು.

ಅಷ್ಟೇ ಅಲ್ಲ ನಾವು ಇನ್ನೂ ತಿಳಿದುಕೊಳ್ಳಬೇಕಾದದ್ದು ಏನೆಂದರೆ, ಆಂಜನೇಯ ಸ್ವಾಮಿಗೆ ಎಷ್ಟು ಸಿದ್ಧಿಗಳಿದ್ದರೂ, ಎಷ್ಟು ಶಕ್ತಿಗಳನ್ನು ಪ್ರದರ್ಶಿಸಿದರೂ, ಶ್ರೇಷ್ಠವಾದ ಕಾರ್ಯಗಳನ್ನು ಮಾಡಿದರೂ, ಅವರಿಗೆ ಆತ್ಮಜ್ಞಾನ ಉಂಟಾಗಲಿಲ್ಲ. ಆತ್ಮತತ್ವ ಅರ್ಥವಾಗಲಿಲ್ಲ. ಆತ್ಮಾನುಭವವನ್ನು ಹೊಂದಲಿಲ್ಲ. ಆ ಆತ್ಮವನ್ನು ಅಂದರೆ ಆತ್ಮಾರಾಮನನ್ನು ದರ್ಶಿಸಲು ಅವರು ಬಹಳಷ್ಟು ಹಂಬಲಿಸಿದರು. ಬಹಳಷ್ಟು ಆವೇದನೆ ಅನುಭವಿಸಿದರು. ಶ್ರೀ ರಾಮನ ಪಟ್ಟಾಭಿಷೇಕವಾದ ನಂತರ ತಾವೇದನೆಯಿಂದ ಮುತ್ತಿನ ಹಾರದಲ್ಲಿನ ಮುತ್ತುಗಳೆಲ್ಲವನ್ನೂ ಕಚ್ಚಿ ನೋಡಿದನು ಆದರೆ ಆತ್ಮಾರಾಮ ಕಾಣಿಸಲಿಲ್ಲ.

ಆಂಜನೇಯ ಸ್ವಾಮಿ ಹಾಗೆ ಮಾಡುತ್ತಿದ್ದರೆ ಆಂಜನೇಯ ಸ್ವಾಮಿಯು ಆತ್ಮಾನುಭವವನ್ನು ಹೊಂದಬೇಕೆಂಬ ಹಂಬಲದಲ್ಲಿರುವನೆಂದು ತಿಳಿದುಕೊಂಡ ಶ್ರೀರಾಮಚಂದ್ರನು ಆಂಜನೇಯ ಸ್ವಾಮಿಯನ್ನು ತನ್ನ ಮಂದಿರಕ್ಕೆ ಬರಲು ಹೇಳಿ, ಆತ್ಮಜ್ಞಾನವನ್ನು ಬೋಧಿಸಿದನು. ಬೋಧಿಸಿದ ನಂತರ ಶ್ರೀರಾಮನು ಆಂಜನೇಯ ಸ್ವಾಮಿಯನ್ನು ಕೇಳಿದನು. ಈಗ ನಿನಗೆ ಆತ್ಮಜ್ಞಾನ ಉಂಟಾಯಿತೇ? ಆತ್ಮತತ್ವ

ಅರ್ಥವಾಯಿತೇ? ಎಂದರೆ ಆಂಜನೇಯ ಸ್ವಾಮಿ ಅರ್ಥವಾಯಿತು ಎಂದರು. ಶ್ರೀರಾಮನು ವಿವರಿಸು ಎಂದು ಕೇಳಿದಾಗ ಆಂಜನೇಯ ಸ್ವಾಮಿ ಈ ರೀತಿಯಾಗಿ ಮೂರು ಮಾತುಗಳಲ್ಲಿ ಆತ್ಮತತ್ವವನ್ನು ವಿವರಿಸಿದನು.

"**ನಾನು ದೇಹ ಸ್ಥಿತಿಯಲ್ಲಿದ್ದಾಗ ನಿನಗೆ ಬಂಟನೆಂದುಕೊಂಡೆನು. ಅಂದರೆ ನೀನು ನಾನು ಬೇರೆಬೇರೆ ಎಂದುಕೊಂಡೆನು. ಮನೋಸ್ಥಿತಿಯಲ್ಲಿದ್ದಾಗ ನೀನು ನನ್ನಲ್ಲಿರುವೆ ಎಂದುಕೊಂಡೆನು. ಆದರೆ ಆತ್ಮಸ್ಥಿತಿಯಲ್ಲಿ ನೀನು, ನಾನು ಒಂದೇ ಎಂದು ತಿಳಿದುಕೊಂಡೆನು**". ಎಂದು ಹೇಳಿದಾಗ ಶ್ರೀ ರಾಮನು ನೀನು ಆತ್ಮಜ್ಞಾನಿಯಾಗಿರುವೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದನು.

ಮೇಲಿನ ವಿಷಯಗಳನ್ನಾಧರಿಸಿ ಶಕ್ತಿಗಳು, ಸಿದ್ಧಿಗಳು ಎನ್ನುವಂತಹವು ಪರಿಪೂರ್ಣ ಸ್ಥಿತಿ ಅಲ್ಲವೆಂದು ತಿಳಿಯುತ್ತದೆ. ಆತ್ಮಜ್ಞಾನವೇ ಎಲ್ಲದಕ್ಕಿಂತಲೂ ಪೂರ್ಣ ಸ್ಥಿತಿ ಎಂದು ನಮಗೆ ಅರ್ಥವಾಗುತ್ತದೆ. ಆದ್ದರಿಂದ ಧ್ಯಾನ ಮಾಡುವವರು ಅನುಭವಗಳನ್ನು, ಶಕ್ತಿಗಳನ್ನು ಹೊಂದಿದ್ದೇವೆಯೇ? ಇಲ್ಲವೇ? ಎಂದು ನೋಡಬಾರದು, ವಾಸ್ತವವಾಗಿ ಅವುಗಳಿಗೆ ಪ್ರಾಮುಖ್ಯತೆ ನೀಡುವ ಅಗತ್ಯವಿಲ್ಲ. ಒಂದು ವೇಳೆ ಹೊಂದಿದರೂ ಆಂಜನೇಯ ಸ್ವಾಮಿಯಂತೆ ಇಲ್ಲದಂತೆ ಇರುವವನೇ ಶ್ರೇಷ್ಠನು ಎಂದು ತಿಳಿದುಕೊಳ್ಳಬೇಕು.

ಆದರೆ ಪ್ರಸ್ತುತ ಧ್ಯಾನ ಮಾಡುವುದು, ಧ್ಯಾನ ಹೇಳಿಕೊಡುವುದು, ಧ್ಯಾನ ಪ್ರಚಾರ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವುದು ಏಕೆ ಮಾಡುತ್ತಿದ್ದಾರೆಂದರೆ ತಮ್ಮ ಪ್ರಾಪಂಚಿಕ ಸಮಸ್ಯೆಗಳು ಪರಿಹಾರವಾಗುತ್ತವೆ ಎಂದು, ಪ್ರಾಪಂಚಿಕ ಕೋರಿಕೆಗಳು, ಆರೋಗ್ಯ ಸಮಸ್ಯೆಗಳು, ಆರ್ಥಿಕ ಸಮಸ್ಯೆಗಳು ಬಗೆಹರಿಯುತ್ತವೆ ಎಂದು, ಜೀವನ ಯಾವುದೇ ಅಡೆತಡೆಗಳಿಲ್ಲದಂತೆ ಸರಾಗವಾಗಿ ನಡೆಯುತ್ತದೆ ಎಂದು, ಹಲವಾರು ಅನುಭವಗಳು ಉಂಟಾಗುತ್ತವೆ ಎಂಬ ಉದ್ದೇಶದಿಂದ ಮೇಲಿನ ಕಾರ್ಯಕ್ರಮಗಳ ಸಾಧನೆ ಮಾಡುತ್ತಿದ್ದಾರೆ. ಹಾಗೆ ಮಾಡುತ್ತಾ ಒಂದು ವೇಳೆ ಅಲ್ಪಸ್ವಲ್ಪ ಅನುಭವಗಳು ಉಂಟಾದರೂ, ನನಗೆ ಅನುಭವಗಳು ಉಂಟಾದ ವೆಂದು, ಲಾಭಗಳು ಬಂದಿವೆಯೆಂದು ಎಲ್ಲರಿಗೂ ದೊಡ್ಡದಾಗಿ ಹೇಳಿಕೊಳ್ಳುತ್ತಾರೆಯೇ ಹೊರತು ಜ್ಞಾನವನ್ನು ಹೆಚ್ಚಿಸಿಕೊಳ್ಳಲು, ಜ್ಞಾನ ಹೆಚ್ಚಾಗಿದೆಯೇ? ಇಲ್ಲವೇ? ಎಂಬುದರ ಮೇಲೆ ಯಾರೂ ದೃಷ್ಟಿ ಇಡುತ್ತಿಲ್ಲ. ಧ್ಯಾನ... ಜ್ಞಾನಕ್ಕಾಗಿ ಎಂಬ ತಿಳುವಳಿಕೆ ಯಾರಿಗೂ ಇಲ್ಲ.

ಹಾಗೆಯೇ ಶ್ರೀ ಆದಿಶಂಕರಾಚಾರ್ಯರು ತಮ್ಮ ಪರ್ಯಟನೆಯಲ್ಲಿ ಒಬ್ಬ ಸಿದ್ದರನ್ನು ಭೇಟಿಯಾದರು, ಅವರಿಂದ ಅನೇಕ ಸಿದ್ದಿಗಳನ್ನು ಸಹ ಕಲಿತುಕೊಂಡರು. ಅವರಿಂದ ಪರಕಾಯ ಪ್ರವೇಶ ದಂತಹ ವಿದ್ಯೆಗಳನ್ನು ಸಹ ಕಲಿತುಕೊಂಡರು.

ಆ ಸಂದರ್ಭದಲ್ಲಿ ಆ ಸಿದ್ದನು ಹೇಳಿದ್ದೇನೆಂದರೆ ಎಲ್ಲಾ ವಿಧಗಳಲ್ಲಿಯೂ ಎಲ್ಲಾ ಇರುವ ನಾನು ಈ ಪ್ರಜೆಗಳ ಮೂರ್ಖತನ, ಅಜ್ಞಾನವನ್ನು ನೋಡಿ, ಅವರು ಮಾಡುತ್ತಿರುವ ಕೆಲಸಗಳನ್ನು ನೋಡಿ ಅಸಮಾಧಾನಗೊಂಡು, ಎಲ್ಲವನ್ನೂ ತ್ಯಜಿಸಿ ಕಠೋರ ಸಾಧನೆಗಳನ್ನು ಮಾಡಿ ಹೀಗೆ ಸಿದ್ದಿಗಳನ್ನು ಸಂಪಾದಿಸಿದೆನು. ಈ ಸಿದ್ದಿಗಳನ್ನು, ಶಕ್ತಿಗಳನ್ನು ಉಪಯೋಗಿಸಿ ಪ್ರಜೆಗಳ ವರ್ತನೆಯನ್ನು ಬದಲಾಯಿಸಬೇಕು ಎಂದುಕೊಂಡೆನು. ಜ್ಞಾನವಂತರನ್ನಾಗಿ ಮಾಡಬೇಕು ಎಂದುಕೊಂಡೆನು ಆದರೆ ನನಗೆ ಸಾಧ್ಯವಾಗಲಿಲ್ಲ. ಅದು ಜ್ಞಾನಿಯಾದ ನಿನ್ನಿಂದಲೇ ಸಾಧ್ಯವಾಗುತ್ತದೆ ಎಂದು ಹೇಳಿದನು. ಅವರು ಅಷ್ಟೊಂದು ಸಿದ್ದಿಗಳು, ಶಕ್ತಿಗಳಿದ್ದರೂ ಸಹ ತನ್ನ ನಿಷ್ಕ್ರಿಯತೆಯನ್ನು ಅಂಗೀಕರಿಸಿದನು.

ಇದನ್ನಾಧರಿಸಿ ಸಿದ್ದಿಗಳು, ಶಕ್ತಿಗಳು ಪರಿಪೂರ್ಣ ಜ್ಞಾನಕ್ಕೆ ಸಂಕೇತವಲ್ಲ. ಅವು ಜ್ಞಾನವನ್ನು ಹೊಂದಲು ಸಹಕರಿಸುತ್ತವೆ. ಪೂರ್ಣ ಜ್ಞಾನವನ್ನು ಹೊಂದಲು ಬಹಳಷ್ಟು ಉಪಯುಕ್ತವಾಗುತ್ತವೆಯೇ ಹೊರತು ಅವುಗಳಿಂದ ಪೂರ್ಣ ಜ್ಞಾನಿಯಾದಂತೆ ಅಲ್ಲ ಎಂದು ತಿಳಿದುಕೊಳ್ಳಬೇಕು. ಅಷ್ಟೇ ಅಲ್ಲ ಜಗತ್ತನ್ನು, ಜಗತ್ತಿನಲ್ಲಿರುವವರನ್ನು ಜ್ಞಾನವಂತರನ್ನಾಗಿ ಮಾಡಬೇಕೆಂದರೆ ಸಿದ್ದಿಗಳು, ಶಕ್ತಿಗಳು ಸಾಕಾಗುವುದಿಲ್ಲ. ಅದಕ್ಕೆ ಜ್ಞಾನವೇ ಬೇಕು. ಜ್ಞಾನಿಯೇ ಜ್ಞಾನವನ್ನು ಬೋಧಿಸಬಲ್ಲನೇ ಹೊರತು ಶಕ್ತಿಗಳಿರುವವನಲ್ಲ ಎಂದು ಅರ್ಥ ಮಾಡಿಕೊಳ್ಳಬಹುದು. ಸಿದ್ದಿಗಳು, ಶಕ್ತಿಗಳು ಎನ್ನುವಂತಹವು ಜ್ಞಾನ ಹೊಂದುವುದಕ್ಕಿಂತ ಮುಂಚಿನ ಸ್ಥಿತಿ ಅಷ್ಟೇ ಹೊರತು, ಪರಿಪೂರ್ಣ ಸ್ಥಿತಿ ಮಾತ್ರ ಅಲ್ಲ. ಅವುಗಳನ್ನು ಪ್ರದರ್ಶಿಸಿದರೆ ಶ್ರೇಷ್ಠನಾದಂತೆ ಅಲ್ಲವೆಂದು ಅರ್ಥ ಮಾಡಿಕೊಳ್ಳಬೇಕು.

ಆದ್ದರಿಂದ ಜ್ಞಾನದ ಶ್ರೇಷ್ಠತೆಯನ್ನು ತಿಳಿದುಕೊಳ್ಳಿ, ಜ್ಞಾನದ ಅವಶ್ಯಕತೆಯನ್ನು ಅರ್ಥ ಮಾಡಿಕೊಳ್ಳಿ. ಜ್ಞಾನವನ್ನು ಹೆಚ್ಚಿಸಿಕೊಳ್ಳಿ. ಜ್ಞಾನವಂತರಾಗಿ. ಸುಮ್ಮನೆ ಅನುಭವಗಳಿಗಾಗಿ ಹಂಬಲಿಸಬೇಡಿ. ಅವುಗಳನ್ನು ನೋಡಿ ಬೀಗಬೇಡಿ. ಅವುಗಳನ್ನು ಹೊಂದಿರುವವರನ್ನು ನೋಡಿ ಶ್ರೇಷ್ಠರೆಂದು ಭಾವಿಸಬೇಡಿ. ಮಾಡಬೇಕಾದದ್ದನ್ನು ತಿಳಿದುಕೊಂಡು ಹೊಂದಬೇಕಾದದ್ದನ್ನು ತಿಳಿದುಕೊಳ್ಳಿ. ಮತ್ತೊಮ್ಮೆ ತಿಳಿದುಕೊಳ್ಳಿ.

"ಮಾಡಬೇಕಾದದ್ದು ಧ್ಯಾನ ಹೊಂದಬೇಕಾದದ್ದು ಜ್ಞಾನ". ಕಾರಣ "ಧ್ಯಾನದಿಂದಲೇ ಜ್ಞಾನ... ಜ್ಞಾನದಿಂದಲೇ ಮುಕ್ತಿ".



# ಶ್ರೀ ರಾಮಧಾಮ ಧ್ಯಾನಕೇಂದ್ರ

ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್, ಬೆಂಗಳೂರು–560 066.
ಸಂಪರ್ಕಿಸಿ : ಹೆಚ್. ಎನ್. ಶ್ರೀನಿವಾಸ, 9449695503
ವಿಜಯಲಕ್ಷ್ಮೀ ಎಸ್.ಎನ್. 80500 82689

## ಆತ್ಮಜ್ಞಾನ ಶಿಕ್ಷಣ ಶಿಬಿರ ಕಾರ್ಯಕ್ರಮಗಳು

* ಪ್ರತಿ ಸೋಮವಾರ ಸಂಜೆ 6.30 ರಿಂದ 8.30 ರವರೆಗೆ ಧ್ಯಾನ ತರಗತಿಗಳು ನಡೆಯುತ್ತವೆ.
* ಹುಣ್ಣಿಮೆ ಹಾಗೂ ಅಮಾವಾಸ್ಯೆ ಧ್ಯಾನ
* ಪ್ರತಿ ಆರು ತಿಂಗಳಿಗೊಮ್ಮೆ ಆತ್ಮಜ್ಞಾನ ಶಿಕ್ಷಣ ಶಿಬಿರ ಉಚಿತವಾಗಿ ನಡೆಯುತ್ತದೆ ಇದರ ವಿವರಗಳನ್ನು ಧ್ಯಾನ ಕಸ್ತೂರಿಯಲ್ಲಿ ಹಾಗೂ ಪಿಎಂಸಿ ಕನ್ನಡ ಚಾನೆಲ್‌ನಲ್ಲಿ ಪ್ರಕಟಿಸಲಾಗುವುದು.

## ಶ್ರೀ ರಾಮ ಪಬ್ಲಿಕೇಶನ್ಸ್‌ನಲ್ಲಿ ದೊರೆಯುವ ಪುಸ್ತಕಗಳು

| | | |
|---|---|---|
| 1. | ಅಹಿಂಸೆ & ಶಾಖಾಹಾರ | ರೂ. 20 |
| 2. | ನವವಿಧ ಧರ್ಮಗಳು | ರೂ. 15 |
| 3. | ಸಸ್ಯಾಹಾರವೇ ಮಾನವಾಹಾರ | ರೂ. 20 |
| 4. | ಧ್ಯಾನ | ರೂ. 60 |
| 5. | ವಿದ್ಯಾರ್ಥಿಗಳ ವಿಕಾಸಕ್ಕೆ ಧ್ಯಾನ ವಿದ್ಯೆ | ರೂ. 30 |
| 6. | ಭಾಗವತ ಸನ್ನಿವೇಶಗಳ ಅಂತರಾರ್ಥ | ರೂ. 30 |
| 7. | ಶಿರಿಡಿ ಸಾಯಿ ಸಂದೇಶಗಳು | ರೂ. 30 |
| 8. | ಪ್ರಾಣ ಶಕ್ತಿ | ರೂ. 100 |
| 9. | ಜೀವನದ ಸೂಕ್ಷ್ಮಗಳು | ರೂ. 60 |
| 10. | ವಿದ್ಯಾರ್ಥಿ ಜೀವನ ಕ್ರಾಂತಿ | ರೂ. 40 |
| 11. | ಸಂಘಂ ಶರಣಂ ಗಚ್ಛಾಮಿ | ರೂ. 300 |
| 12. | ತುಳಸಿ ದಳ (I) | ರೂ. 200 |
| 13. | ತುಳಸಿ ದಳ (ii) | ರೂ. 220 |
| 14. | ಆಶ್ಚರ್ಯ....ಆಶ್ಚರ್ಯ | ರೂ. 40 |
| 15. | ದುಃಖ ನಿವಾರಣೆಯ ಮಾರ್ಗ | ರೂ. 70 |
| 16. | ಧ್ಯಾನದಿಂದಲೇ ಜ್ಞಾನ | ರೂ. 70 |
| 17. | ಬ್ರಹ್ಮಜ್ಞಾನ | ರೂ. 70 |
| 18. | ಜ್ಞಾನ ಜ್ಯೋತಿ | ರೂ. 90 |
| 19. | ಗೈಡಿಂಗ್ | ರೂ. 100 |
| 20. | ಸಂಕಲ್ಪವೆಂದರೇನು? | ರೂ. 50 |
| 21. | ಕರ್ಮ ಸಿದ್ಧಾಂತ | ರೂ. 70 |
| 22. | ಜ್ಞಾನ ಕುಸುಮಗಳು | ರೂ. 90 |
| 23. | ಆಲೋಚನಾ ಶಕ್ತಿ | ರೂ. 40 |
| 24. | ಆತ್ಮವಿಜ್ಞಾನ ಮತ್ತು ಮೃತ್ಯುವೇ ಇಲ್ಲ | ರೂ. 40 |
| 25. | ಆಧ್ಯಾತ್ಮಿಕ ಶಾಸ್ತ್ರ | ರೂ. 40 |
| 26. | ಭಕ್ತಿ ಮುಕ್ತಿ | ರೂ. 30 |
| 27. | ಧ್ಯಾನ ತರಂಗ | ರೂ. 40 |
| 28. | ಜ್ಞಾನ ಯುಗ | ರೂ. 60 |
| 29. | ಸೇತು ವಿಜ್ಞಾನ | ರೂ. 40 |
| 30. | ಮರಣಿಸುವ ಮುಂಚೆಯೇ ಮರಣಿಸಬೇಕು | ರೂ. 130 |
| 31. | ಅತೀಂದ್ರಿಯ ಶಕ್ತಿಗಳು | ರೂ. 40 |
| 32. | ನಾವು ಇಹಲೋಕ ವಾಸಿಗಳಾ? ಪರಲೋಕ ವಾಸಿಗಳಾ? | ರೂ. 40 |

# "ಧ್ಯಾನ ಮಾಡುವ ವಿಧಾನ"

**ಯಾವುದಾದರೂ ಸುಖಾಸನದಲ್ಲಿ .. ಹಾಯಾಗಿ ಕುಳಿತುಕೊಂಡು ..**
**ಕೈಗಳೆರಡೂ ಸೇರಿಸಿಕೊಂಡು .. ಕಣ್ಣೆರಡೂ ಮುಚ್ಚಿಕೊಂಡು ..**
**ಪ್ರಕೃತಿ ಸಹಜವಾಗಿ ನಡೆಯುತ್ತಲಿರುವ ಉಚ್ಛ್ವಾಸ, ನಿಶ್ವಾಸಗಳನ್ನೇ ..**
**ಏಕಧಾರೆಯಾಗಿ .. ಗಮನಿಸುತ್ತಾ ಇರಬೇಕು!**

## ಧ್ಯಾನವನ್ನು ಯಾರಾದರೂ ಮಾಡಬಹುದು
## ಯಾವ ವಯಸ್ಸಿನವರಾದರೂ ಮಾಡಬಹುದು
## ಯಾವ ಸಮಯದಲ್ಲಿಯಾದರೂ ಮಾಡಬಹುದು
## ಯಾವ ಸ್ಥಳದಲ್ಲಿಯಾದರೂ ಮಾಡಬಹುದು.

ಧ್ಯಾನವನ್ನು ನಿಯಮಿತವಾಗಿ ತಪ್ಪದೇ ಮಾಡಬೇಕು....
ಅವರವರ ವಯಸ್ಸಿಗೆ ಅನುಗುಣವಾಗಿ ಪ್ರತಿಯೊಬ್ಬರೂ, ಪ್ರತಿನಿತ್ಯವೂ ಧ್ಯಾನ ಮಾಡಬೇಕು
ಉದಾಹರಣೆಗೆ, ನಿಮ್ಮ ವಯಸ್ಸು ಇಪ್ಪತ್ತು ವರ್ಷಗಳಾಗಿದ್ದರೆ, ಇಪ್ಪತ್ತು ನಿಮಿಷಗಳ ಕಾಲ ಧ್ಯಾನ ಮಾಡಬೇಕು.
ನಿಮ್ಮ ವಯಸ್ಸು ನಲವತ್ತು ವರ್ಷಗಳಾಗಿದ್ದರೆ ನಲವತ್ತು ನಿಮಿಷಗಳ ಕಾಲ
ಹೀಗೆ ವಯಸ್ಸಿಗೆ ಅನುಗುಣವಾಗಿ ಧ್ಯಾನ ಮಾಡಬೇಕು.



"ಧ್ಯಾನ ಅಂದರೆ ಪೂಜೆ ಅಲ್ಲ"
"ಧ್ಯಾನ ಅಂದರೆ ಪ್ರಾರ್ಥನೆ ಅಲ್ಲ"
"ಧ್ಯಾನ ಅಂದರೆ ಸ್ತೋತ್ರ ಅಲ್ಲ"
"ಧ್ಯಾನ ಅಂದರೆ ನಾಮಸ್ಮರಣೆ ಅಲ್ಲ"
"ಧ್ಯಾನ ಅಂದರೆ ಮಂತ್ರಜಪ ಅಲ್ಲ"
"ಧ್ಯಾನ ಅಂದರೆ ಶ್ವಾಸದ ಮೇಲೆ ಗಮನ"

**ಧ್ಯಾನ.. ಎಂದರೆ.. ಶ್ವಾಸಧಾರೆಯ.. ಮೇಲೆ.. ಧ್ಯಾಸಧಾರೆ**

ರೂ 40/-

**ಪಿರಮಿಡ್ ಸ್ಪಿರಿಚ್ಯುಯಲ್ ಸೊಸೈಟೀಸ್ ಮೂವ್‌ಮೆಂಟ್, ಇಂಡಿಯಾ**

ಧ್ಯಾನದ ಬಗ್ಗೆ ಮತ್ತಷ್ಟು ಸಮಾಚಾರಕ್ಕಾಗಿ ಈ ಕೆಳಗಿನ ವೆಬ್‌ಸೈಟ್ ಸಂದರ್ಶಿಸಿ

https: //www.youtube.com/pmckannada ● www.meditationeverywhere.org ● www.pssmovement.org

**ಶ್ರೀರಾಮ ಪಬ್ಲಿಕೇಶನ್ಸ್**

ಶ್ರೀರಾಮಧಾಮ ಧ್ಯಾನಕೇಂದ್ರ, ನಾರಾಯಣಪ್ಪ ಗಾರ್ಡನ್,
ವೈಟ್ ಫೀಲ್ಡ್, ಬೆಂಗಳೂರು - 560 066
ಸಂಪರ್ಕಿಸಿ : ಹೆಚ್.ಎನ್. ಶ್ರೀನಿವಾಸ, 9449695503
ವಿಜಯಲಕ್ಷ್ಮಿ ಎಸ್.ಎನ್. + 91 80500 82689